# ಸಿದ್ಧಗಂಗಾ

ಸಂಪುಟ—೨೦ ಸಂಚಿಕೆ- ೬ ಜೂನ್, ೧೯೮೪

## ನಿರಂಜನ

—ಶಂ. ಗು. ಬಿರಾದಾರ

ತೋಂಟದಾರ್ಯ ಮಠದ ಪೀಠ
ಕಿದೋ ಮೆರಗು ಬಂದಿದೆ.
ಸಿದ್ಧಲಿಂಗ ಯತಿಗಳಿಂದ
ಹೊಸತು ಜೀವ ತುಂಬಿದೆ.
ಬೆಳಕು ಬೆಳಕು ಮಹಾ ಬೆಳಕಿ
ತರುಣ ಕಿರಣ ಸೂಸಿದೆ.
ಧರ್ಮ ತತ್ವ ಸುಸಂಸ್ಕೃತಿಯು
ಕಲೆಯು ಗಾಳಿ ಬೀಸಿದೆ.
ಹಳತು ಹೊಸತು ಸಂಪ್ರದಾಯ
ನವ್ಯದೆರಕ ಭಾವನಾ.
ಅಂದು ಇಂದು ಹೊಂದಿಕೊಂಡು
ಮುಂದುವರೆವ ಚೇತನಾ.
ಸರಸವಾಣಿ ವರದಪಾಣಿ
ನೈಜಗುರು ನಿರಂಜನ.
ಶುಭೋದಯಕೆ ನಾಂದಿ ಹಾಡಿ
ಇದೋ ನಿಮಗೆ ವಂದನ.

# ಈ ಸಂಚಿಕೆಯಲ್ಲಿ







# ಶ್ರೀವಾಣಿ

## ಹೆಣ್ಣು : ಅಂದು-ಇಂದು

ನಮ್ಮ ಸಂಸ್ಕೃತಿಯಲ್ಲಿ ಹೆಣ್ಣಿಗೆ ಉತ್ತಮ ಸ್ಥಾನವಿದೆ. ಹೆಣ್ಣಿನ ಬಗೆಗಿನ ಈ ಮಾನ್ಯತೆಯನ್ನು ಎಲ್ಲ ಧರ್ಮಗಳೂ ಒಪ್ಪುತ್ತವೆ. ಮನುಧರ್ಮಶಾಸ್ತ್ರದಲ್ಲಿ ಹೇಳಿರುವ ಒಂದು ಶ್ಲೋಕ ಹೀಗಿದೆ :

"ಪಿತಾ ರಕ್ಷತಿ ಕೌಮಾರೇ । ಭರ್ತಾ ರಕ್ಷತಿ ಯೌವನೇ ।
ಪುತ್ರಸ್ತು ಸ್ಥಾವಿರೇ ಭಾವೇ । ನಸ್ತ್ರೀ ಸ್ವಾತಂತ್ರ್ಯ ಮರ್ಹತಿ॥"

'ಹೆಣ್ಣು ಚಿಕ್ಕಂದಿನಲ್ಲಿ ತಂದೆಯ ಅಧೀನ, ಯೌವನದಲ್ಲಿ ಗಂಡನ ಅಧೀನ, ಇಳಿ ವಯಸ್ಸಿನಲ್ಲಿ ಮಕ್ಕಳ ಅಧೀನ, ಅವಳಿಗೆ ಸ್ವಾತಂತ್ರ್ಯವಿಲ್ಲ' ಈ ಮನು ವಾಕ್ಯವನ್ನು ಅನೇಕವಾಗಿ ಅರ್ಥೈಸಿದ್ದಾರೆ. ಮನುವಿನ ಉದ್ದೇಶವೇನಿತ್ತು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಆತನ ಉದ್ದೇಶ, ಆಕೆ ಸ್ವಾತಂತ್ರ್ಯಕ್ಕೆ ಅನರ್ಹಳೆಂದಲ್ಲ. ಆರ್ಥಿಕವಾದ ಜವಾಬ್ದಾರಿ ಆಕೆಗೆ ಬೇಡ ಏಕೆಂದರೆ ಹೆಣ್ಣು ಕುಟುಂಬದ ಕೇಂದ್ರ ಶಕ್ತಿ. ಆಕೆ ಮನೆಯ ವಹಿವಾಟವನ್ನು ನೋಡಿಕೊಂಡು ತನ್ನ ಸಂತಾನವನ್ನು ಯೋಗ್ಯ ರೀತಿಯಲ್ಲಿ ಬೆಳೆಸಿದರೆ ಸಾಕು. ಆಕೆ ದುಡಿಯಲು ಬೇರೆ ಉದ್ಯೋಗವನ್ನವಲಂಬಿಸಬೇಕಿಲ್ಲ ಎಂದು ಮಾತ್ರ ಆ ಶ್ಲೋಕದ ಅರ್ಥವೆಂದು ನಮ್ಮ ಭಾವನೆ. ಉಪನಿಷತ್ತುಗಳು ಹೆಣ್ಣಿನ ಬಗ್ಗೆ ಅತ್ಯಂತ ಗೌರವದ ನಿಲವನ್ನು ತಳೆದಿದೆ. ಅವು 'ಮಾತೃದೇವೊ ಭವ' ಎಂದಿವೆ. ಈ ಪರಂಪರೆ ಇಂದಿನವರೆಗೂ ನಡೆದು ಕೊಂಡು ಬಂದಿದೆ. ಆದರೆ ಮಧ್ಯೆಮಧ್ಯೆ ಹೆಣ್ಣನ್ನು ನೋಡುವ ದೃಷ್ಟಿಯಲ್ಲಿ ವ್ಯತ್ಯಾಸ ಕಂಡುಬಂದಿದೆ. 'ಅಗ ದ್ರಷ್ಟಾರರು ಸಮಾಜದ ಕಣ್ಣನ್ನು ತೆರೆಸಿದ್ದಾರೆ. ಬಸವಣ್ಣನವರು ಹೆಣ್ಣನ್ನು "ಮಹಾದೇವಿ" ಎಂದು ಕರೆದರು. ಸಿದ್ಧರಾಮರು 'ಹೆಣ್ಣನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಸಾರಿದರು.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಸಿ. ಎನ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ.

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

**ವಾರ್ಷಿಕ ಚಂದಾ 15-00 ರೂ**

**ಅಜೀವ ಸದಸ್ಯತ್ವ 201-00 ರೂ**

**1984 ನೇ ಜನವರಿಯಿಂದ**

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ದಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಭಾರತದ ಸಮಗ್ರತೆಯ ಹಿತಾಸಕ್ತಿಗಳನ್ನು ಕಾಪಾಡಿಕೊಂಡು ಬರಬೇಕಾದ ಗುರುತರ ಕಾರ್ಯಗೌರವಕ್ಕೆ ಅನೇಕ ಬಗೆಯ ಕಾಲ್ತೊಡಕುಗಳನ್ನು ಎದುರಿಸುವ ಪರಿಸ್ಥಿತಿ ಈಗ ಭಾರತದಲ್ಲಿ ಉಂಟಾಗಿರುವುದು ಶೋಚನೀಯವೆನಿಸಿದೆ. ಸ್ವಾತಂತ್ರ್ಯಾನಂತರ ಭಾರತ ಅಭಿವೃದ್ಧಿಮಾರ್ಗದಲ್ಲಿ ಮುನ್ನಡೆಯಲು ಅನೇಕ ತೊಡಕುಗಳನ್ನು ವಿರೋಧ ರಾಷ್ಟ್ರಗಳು ಮಾಡಿದ್ದರೂ ಅವುಗಳನ್ನು ಬದಿಗೊತ್ತಿ ಅನೇಕ ಮಿತ್ರ ರಾಷ್ಟ್ರಗಳ ನೆರವನ್ನು ಪಡೆದು ಅಪಾರ ಸಾಧನೆ ಮಾಡಿದ್ದರೂ ರಾಷ್ಟ್ರೀಯ ಅಗತ್ಯಗಳನ್ನು ಪೂರೈಸುವಷ್ಟು ಮಟ್ಟದ ಅಭಿವೃದ್ಧಿ ಇನ್ನೂ ಆಗಿಲ್ಲ. ಆಗಬೇಕಾದುದು ಇನ್ನೂ ಬಹಳ ಇದೆ. ಅಭಿವೃದ್ಧಿಶೀಲ ರಾಷ್ಟ್ರಗಳ ಮಟ್ಟದಲ್ಲಿ ಮೇಲೇರಲು ಇದು ಮಾಡುತ್ತಿರುವ ಪ್ರಯತ್ನಗಳು ಸಾಗಿದ್ದರೂ ಭಾರತದ ಅನೇಕ ಸಮಸ್ಯೆಗಳು ಎಂಥವರನ್ನೂ ಧೃತಿಗೆಡಿಸುವಷ್ಟರ ಮಟ್ಟಿಗೆ ಬೆಳೆಯ ತೊಡಗಿದುದು ವಿಪರ್ಯಾಸ. ಪಂಜಾಬಿನಲ್ಲಿ ಬಹುದಿನಗಳಿಂದ ಹೊಗೆಯಾಡುತ್ತಿದ್ದ ಭಾರತದ ಸಮಗ್ರತೆಗಳಿಗೆ ಧಕ್ಕೆತರುವ ವಿಧ್ವಂಸಕ ಕೃತ್ಯಗಳ ಬಗೆಗೆ ಸರಕಾರ ಬಹಳ ತಾಳ್ಮೆಯಿಂದ ವರ್ತಿಸಿ ಸಂಧಾನಕ್ಕೆ ಪ್ರಯತ್ನಿಸಿತು. ಸರಕಾರದ ಯಾವ ಸಾಮ-ದಾನ-ಭೇದೋಪಾಯಗಳು ಫಲಕಾರಿಯಾಗದಂತಾದಾಗ ದಂಡೋಪಾಯಕ್ಕೆ ಅನಿವಾರ್ಯವಾಗಿ ಮನಸ್ಸಿಲ್ಲದ ಮನಸ್ಸಿನಿಂದ ಮುಂದಾದುದು ನ್ಯಾಯವೇ ಆಗಿದೆ. ಈ ಕಾರ್ಯ ಇನ್ನೂ ಮೊದಲೇ ಆಗಿದ್ದರೆ ರಾಜ್ಯವ್ಯಾಪ್ತಿಯಲ್ಲಿ ಹರಡಿರುವ ಆ ಕೆಟ್ಟ ರೋಗಕ್ಕೆ ಚಿಕಿತ್ಸೆ ಸಕಾಲದಲ್ಲಿ ಸಿಕ್ಕು ಗುಣವಾಗುತಿತ್ತೋ ಎನಿಸಿದೆ. ಇಡಿ ಪಂಜಾಬಿನ ತುಂಬ ಹರಡಿರುವ ವಿಧ್ವಂಸಕರನ್ನು ಅವರು ಸಂಗ್ರಹಿಸಿದ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಳ್ಳುವ ಕಾರ್ಯವನ್ನು ಭಾರತದ ಸೇನೆ ತಾಳ್ಮೆಯಿಂದಲೇ ಮಾಡುತ್ತಿದೆ. ಆದರೆ ಇದರ ಹಿನ್ನೆಲೆಯಲ್ಲಿ ಭಾರತದ ಒಂದು ಶೂರ ಜನಾಂಗದ ಮನ ನೋಯತಕ್ಕ ಪ್ರಸಂಗ ಅನಿವಾರ್ಯವಾಗಿ ಉಂಟಾಗತೊಡಗಿದ್ದು ಸಹಜವೇ ಆದರೂ, ಅವರು ಈಗ ನ್ಯಾಯವಾಗಿ ಯೋಚಿಸುವುದನ್ನು ಕಲಿಯಬೇಕು. ತಮ್ಮ ತಪ್ಪುಗಳ ಬಗೆಗೆ ಅವರು ಆತ್ಮಶೋಧ ಕಾರ್ಯದಲ್ಲಿ ತೊಡಗಬೇಕು. ಭಾರತದ ಸಮಗ್ರತೆಯನ್ನು ನಾಶಗೊಳಿಸಿ, ತಾವು ಕೆಟ್ಟು ಭಾರತಕ್ಕೂ ಅಪಾಯ ತರುವ ಸ್ಥಿತಿಯಲ್ಲಿ ವರ್ತಿಸಿದರೆ ಭಾರತ ಸರಕಾರ ಕಣ್ಣುಮುಚ್ಚಿ ಕುಳಿತುಕೊಳ್ಳುವುದು ಹೇಗೆ ಸಾಧ್ಯ? ವಿರೋಧ ಪಕ್ಷಗಳು ಪಂಜಾಬಿನ ಈ ಸಮಸ್ಯೆಯನ್ನು ಯೋಗ್ಯ ರೀತಿಯಲ್ಲಿ ವಿಚಾರ ಮಾಡಬೇಕು. ತಮ್ಮ ಸರಕಾರವೇ ಇದ್ದಿದ್ದರೆ ಆಗ ಹೇಗೆ ವರ್ತಿಸುತ್ತಿದ್ದರೆಂಬುದನ್ನು ಗಮನಿಸಬೇಕು. ರಾಷ್ಟ್ರೀಯ ಮಹ

ತ್ವದ ಪ್ರಶ್ನೆಬಂದಾಗ ಪಕ್ಷಾಭಿಮಾನ, ಗುಂಪುಗಾರಿಕೆಯ ಶಕ್ತಿಯನ್ನು ಬದಿಗೊತ್ತಿ ಒಕ್ಕೊರಲಿನಿಂದ ಕಾರ್ಯಮಾಡುವ ಪ್ರವೃತ್ತಿಯನ್ನು ಭಾರತೀಯರು ಬೆಳೆಸಿಕೊಳ್ಳದಿದ್ದರೆ ಹಿಂದಿನ ಸಾವಿರಾರು ವರ್ಷಗಳ ಭಾರತದ ಚರಿತ್ರೆಯಿಂದ ನಾವೇನೂ ಪಾಠ ಕಲಿಯಲಿಲ್ಲವಲ್ಲಾ ಎಂಬ ವ್ಯಥೆಯಾಗದೆ ಇರದು. ಉತ್ಕಟ ಧರ್ಮಾಭಿಮಾನ ರಾಷ್ಟ್ರಾಭಿಮಾನಕ್ಕೆ ಧಕ್ಕೆ ತರುವಂತಿದ್ದರೆ ಅಂಥ ಧರ್ಮದಿಂದ ಸಿಗುವ ಮುಕ್ತಿಗಿಂತಲೂ ರಾಷ್ಟ್ರಾಭಿಮಾನದಿಂದ ಸಿಕ್ಕುವ ನರಕವೇ ಲೇಸು. ಧರ್ಮಾಂಧತೆಯಿಂದ ದೂರವಿರಲು ಭಾರತೀಯರು ಕಲಿಯದಿದ್ದರೆ ವಿಪತ್ಪರಂಪರೆಗಳು ತಪ್ಪಿದ್ದೇ ಅಲ್ಲ. ನಮ್ಮಲ್ಲಿನ ವಿವಿಧ ಧರ್ಮಪಂಥಗಳು ಹೇಗೆ ರಾಷ್ಟ್ರೀಯ ಹಿತಕ್ಕೆ ಕಾಲ್ತೊಡಕಾಗುತ್ತವೆ ಎನ್ನುವುದು ಪಂಜಾಬಿನ ಸಿಖ್ ಮತ್ತು ಹಿಂದೂ ಧರ್ಮಗಳ ತಿಕ್ಕಾಟದಿಂದ ಅರಿಯಬಹುದು. ನೂರಾರು ಧರ್ಮಗಳ ಪರಸ್ಪರ ತಿಕ್ಕಾಟದಿಂದಲೇ ಭಾರತೀಯರು ಹೇಗೆ ಸರ್ವನಾಶವಾದರೆಂಬುದನ್ನು ಹಿಂದಿನ ಚರಿತ್ರೆಯ ಪುಟಗಳನ್ನು ತಿರುವಿಹಾಕಲು ಭಾರತೀಯರು ಕಲಿಯಲಿಲ್ಲವಲ್ಲಾ ಎಂಬ ವ್ಯಥೆಯಾಗುತ್ತಿದೆ. ಪಂಜಾಬಿನ ಭೌಗೋಳಿಕ ಸನ್ನಿವೇಶ ದೃಷ್ಟಿಯಿಂದ ರಾಷ್ಟ್ರೀಯ ಸಮಗ್ರತೆಯನ್ನು ಕಾಪಾಡಲು ಉಳಿದೆಲ್ಲ ರಾಜ್ಯಗಳಿಗಿಂತ ಪಂಜಾಬಿನವರ ಪಾತ್ರವೇ ಮುಖ್ಯವೆಂಬುದನ್ನು ಈಗಲಾದರೂ ನಮ್ಮ ಸಿಖ್ ಮತ್ತು ಹಿಂದೂ ಜನಾಂಗ ಬೇಗ ಅರಿತು ನಡೆಯುವುದು ಮುಖ್ಯವಲ್ಲವೆ?





## ★ ನವನೀತ ★

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

ಅತಿ ಕುಪಿತಾ ಅಪಿ ಸುಜನಾ ಯೋಗೇನ ಮೃದವೊ ಭವಂತಿ ।
ಹೇಮ್ನಃ ಕಠಿನಸ್ಯಾಪಿ ಹಿ ದ್ರವಣೋಪಾಯೋಽಸ್ತಿನ ತೃಣಾನಾಂ॥

ಸಿಟ್ಟಾದರೂ ಸಜ್ಜನರು ಮರೆತು ಅದನೆಲ್ಲ
ಬಿಟ್ಟು ಮೆದುವಾಗುವರು; ದುರ್ಜನರೊ ಇಲ್ಲ
ಗಟ್ಟಿಗಿದ್ದರು ಚಿನ್ನ ಕರಗುವುದು ಕಾದು
ಸುಟ್ಟು ಕರಕಾಗುವುದು ಅದೆ ಹುಲ್ಲು ಬೋದು.

ಪ್ರಿಯ ವಾಕ್ಯೇಣ ಸರ್ವೇಽಪಿ ಯತಸ್ತುಷ್ಯಂತಿ ಜಂತವಃ ।
ವದ ತಸ್ಮಾತ್ತದೇವ ತ್ವಂ ವಚನೇ ಕಾ ದರಿದ್ರತಾ? ॥

ಜಂತುಜೀವಿಗಳೆಲ್ಲ ನಯನುಡಿಗೆ ಒಲಿದು
ಸಂತುಷ್ಟವಾಗುವುದು ಸತ್ಯವಹುದು
ಇದನರಿತು ನಲ್ನುಡಿಯನಾಡುತಿರು ನೀನು
ಮೆದುನುಡಿಗೆ ಬಡತನವು ಅಂಥದೇನು ?

ಆದಿತ್ಯಸ್ಯೋದಯಂ ತಾತ ! ತಾಂಬೂಲಂ ಭಾರತೀ ಕಥಾ ।
ಇಷ್ಟಾ ಭಾರ್ಯಾ ಸುಮಿತ್ರಂ ಚ ಅಪೂರ್ವಾಣಿ ದಿನೇ ದಿನೇ ॥

ಭಾರತದ ಕಥೆ ಮತ್ತೆ ಭಾರ್ಯೆಯೊಡನಾಟ
ಗೆಳೆತನದ ಸತ್ಕೂಟ, ತಾಂಬೂಲದೂಟ
ನೇಸರನ ಉದಯವಿವು ಇದ್ದರನುದಿನವೂ
ಬೇಸರಕ್ಕೆಡೆಯಿರದು ದಿನವು ಹೊಸತನವು !

—"ಕಾವ್ಯಸುಧಾಪ್ರಿಯ"

(ಕೆ. ಜಿ. ರಂಗಯ್ಯ)

# ಚಿಂತನ-೧

—ವಿದ್ವಾನ್ ಎಸ್. ಷಡಕ್ಷರಿ, B.Sc.M.A.B.Ed.

ಒಂದು ದಿನ ನಮ್ಮೂರಿನ ಬೀದಿಯಲ್ಲಿ ವೈರಾಗ್ಯಮೂರ್ತಿ, ದೈವಭಕ್ತನೆನಿಸಿದ ಮಹಾಶಯನೊಬ್ಬ ಬಂದ. ಕೆಲವು ಕೀರ್ತನೆ–ತತ್ವಗಳನ್ನು ಸಾರುತ್ತ ನಿಂತುಕೊಂಡ. ಬೀದಿಯ ಮನೆಯೊಂದರ ಬಾಗಿಲಿಗೆ ಹೋದ, ಯಜಮಾನನನ್ನು ಕರೆದ, ಒಂದಿಷ್ಟು ಭಸ್ಮದ ಪುಡಿಯನ್ನು ಕೈಗೆಕೊಟ್ಟು ಕೆಲವು ತತ್ವೋಪದೇಶಕ್ಕೆ ತೊಡಗಿದ. ಕೊನೆಗೆ ಯಜಮಾನನಿಂದ ಹಣ ಸಹಾಯವಾಗಬೇಕೆಂದು ಮನವೊಲಿಸಿದ. ಇದನ್ನೆಲ್ಲ ಸ್ವಲ್ಪ ದೂರದಲ್ಲಿ ನಿಂತು ನಾನು ಗಮನಿಸಿದೆ. ಮನೆಮನೆಗೂ ಇದೇ ಕಾರ್ಯದಲ್ಲಿ ಮುಂದುವರಿಯುತ್ತಿದ್ದ. ಮುಗ್ಧ ಜನರ ಮನೆಬಾಗಿಲಿಗೆ ಹೋಗಿ ಈತ ಆಡಂಬರದ ತತ್ವೋಪದೇಶದಲ್ಲಿ ತೊಡಗುವಂತೆ ಕಾಣಿಸಿತು. ಆಗ ನನಗನ್ನಿಸಿತು, ಆಲಸ್ಯವನ್ನು ಮೈಗೂಡಿಸಿಕೊಂಡು ಶ್ರಮೆಯ ಫಲವನರಿಯದ ಈತ ನೀಡಿದ್ದು ಅಗ್ಗದ ವೈರಾಗ್ಯ, ಮೈಗಳ್ಳತನಕ್ಕೆ ಬೇಕಾದ ತತ್ವ ಎಂದು. ಇವತ್ತಿನ ಜನ ಸಾಕಷ್ಟು ಜಾಗೃತರಾಗಬೇಕು.

ಅನೇಕ ದೇವರ ನಾಮಗಳು, ತತ್ವದ ಹಾಡುಗಳು, ವೇದಾಂತ ಲಾವಣಿಗಳು, ದಾಸರ ಪದಗಳು, ಶರಣರ ವಚನಗಳು ಇಂಥಾ ಗ್ರಂಥಗಳಲ್ಲಿ ನಮಗೆ ವೈರಾಗ್ಯ ಬೋಧನೆ ಯಥೇಚ್ಛವಾಗಿ ಸಿಕ್ಕುವುದು. ಈ ಆಡಂಬರದ ವ್ಯಕ್ತಿಗಳ ವೈರಾಗ್ಯ ಇತಿಮಿತಿ ಇಲ್ಲದ ವೈರಾಗ್ಯ, ಬರಿ ಬಾಯಿ ಮಾತಿನ ವಿರಕ್ತಿ, ತೂಕಡಿಸುವವನಿಗೆ ಹಾಸಿಕೊಡುವ ತತ್ವ, ಮೈಗಳ್ಳ ಭಕ್ತಿಯನ್ನು ಬೋಧಿಸುವುದೇ ಈ ಸಾಮಾನ್ಯ ಕೀರ್ತನೆಗಳು, ಇದು ಸಾಲದ್ದಕ್ಕೆ ಈ ಪ್ರಪಂಚದ ಸುಖ ಏನು ಶಾಶ್ವತ, ಎಂದಾದರೊಂದು ದಿನ ಬಿದ್ದುಹೋಗುವ ಈ ಹಾಳು ದೇಹಕ್ಕೆ ಎಷ್ಟು ಉಪಚಾರ ಮಾಡಿ ಏನು ಪ್ರಯೋಜನ? ಎಂಬ ನಿರಾಸೆ ಭಾವಗಳೂ ಸೇರುತ್ತವೆ. ಈ ರೀತಿಯ ಕೀರ್ತನೆ ಹಾಡುಗಳು, ಹೆಚ್ಚು ಮಂದಿ ಜನತೆಯ ಕಿವಿಗೆ ಬಹು ಆಪ್ಯಾಯಮಾನವಾಗಿರುತ್ತವೆ. ಜವಾಬ್ದಾರಿಯನ್ನು ತಪ್ಪಿಸುವ ಈ ದೈನ್ಯತೆಯ ವೈರಾಗ್ಯವನ್ನು, ರಾಗರಾಗಗಳಲ್ಲಿ ತಾಳ ತಂಬೂರಿ ಸಮೇತವಾಗಿ ಹಾಡುತ್ತಿದ್ದರೆ ಮನಸ್ಸಿಗೆ ಮತ್ತೇರಿದಂತಾಗಿ ಈ ಅಗ್ಗದ ವೇದಾಂತದಿಂದ ಕಷ್ಟನಿಷ್ಠೂರಗಳು ಮರೆತು ಹೋದಂತೆ ಭಾಸವಾಗಬಹುದಷ್ಟೆ.

ವೈರಾಗ್ಯವೆಂದರೆ—ತ್ಯಕ್ತವ್ಯೋ ಮಮಕಾರಸ್ತ್ಯಕ್ತುಂ ಯದಿಶಕ್ಯತೇನಾಸೌ
ಕರ್ತವ್ಯೋ ಮಮಕಾರಃ ಕಿಂತು ಸ ಸರ್ವತ್ರಕರ್ತವ್ಯಃ

(42ನೇ ಪುಟ ನೋಡಿ)





# ಶ್ರೀ ಬಸವಣ್ಣನವರು—೪

(ಮಾರ್ಚಿ ಸಂಚಿಕೆಯಿಂದ)

ಡಾ|| ಅ. ನ. ಕೃಷ್ಣರಾಯರು

ಲೌಕಿಕ ಅಧ್ಯಾತ್ಮಗಳನ್ನು ಕೂಡಿ ನಡಸುವದನ್ನು ಬಸವಣ್ಣನವರು ನಿರ್ಧರಿಸಿ ಆಯಿತು. ಮುಂದಿನ ಮಹಾ ಕ್ರಾಂತಿಯ ಬೀಜಾಂಕುರವಾಗಲೇ ಅವರು ಹೃದಯದಲ್ಲಾಗಿತ್ತು. ಅದಕ್ಕೆ ಬೇಕಾದ ಸಲಕರಣೆಗಳನ್ನಾಗಲೇ ಅಣಿಮಾಡಿಕೊಳ್ಳತೊಡಗಿದರು.

**ಸಂಸಾರ**

ಉದ್ದಿಷ್ಟ ಕಾರ್ಯ ಹಿಮಾಲಯದಷ್ಟು ಅಗಾಧ, ತಾನು ತೃಣ ಸಮಾನವಾದ ಪ್ರಾಣಿ. ತನ್ನಿಂದ ನಿಜವಾಗಿಯೂ ಈ ಮಹಾಕೆಲಸ ಸಾಧಿಸುವುದೆ? ವಿರಾಮ ವಿಶ್ರಾಂತಿಗಳಿಗೆಡೆಕೊಡದೆ ಭವಿಷ್ಯತ್ ನಿಯೋಜನೆ ಸದಾ ಹೃದಯವನ್ನು ಕೊರೆಯುತ್ತಿತ್ತು. ಕ್ಷಣಿಕ ಕಾರಣಿಕನಾಗಬಹುದೇ! ಎಂಬ ಅನುಮಾನ ಸಂಶಯಗಳ ಕಾಟವೊಂದೆಡೆಯಲ್ಲಿ; ಇದು ಶಿವನ ಕೆಲಸವಾದರೆ ಅವನೇ ಅದನ್ನು ನಿಂತು ನಡೆಸುತ್ತಾನೆ, ನನಗೇಕೆ ಇಲ್ಲದ ಉಮ್ಮಳ ಎಂಬ ಸಮಾಧಾನವೊಂದೆಡೆಯಲ್ಲಿ: ಮನಸ್ಸು ಶಾಂತಿ ಅಶಾಂತಿ, ಸ್ಥೈರ್ಯ ಸಂಶಯಗಳ ತೂಲೆಗೋಲಿನ ಹಾಗೆ ಆಡುತ್ತಿತ್ತು.

ಜೀವನದ ಸಮ್ಯಕ್ ದರ್ಶನವನ್ನು ಕಂಡು ಅದರ ಬೆಳಕಿನಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಸಾಹಿತ್ಯ ಜೀವನವನ್ನು ರೂಪಿಸಬೇಕೆಂದು ಬಸವಣ್ಣನವರ ಮನಸ್ಸು ಬಯಸುತ್ತಿದ್ದಂತೆ, ಅದು ಇನ್ನೂ ಆ ಸಾಹಸ ಕಾಯಕ್ಕೆ ಸಿದ್ಧವಾಗಿರಲಿಲ್ಲ ಕರ್ಮಕೂಪಾರದಲ್ಲಿ ಬೆಳೆದ ಮನಸ್ಸು ದೀರ್ಘಾವಲಂಬನದ ಒತ್ತಡದಿಂದ ಮತ್ತೆ ಮತ್ತೆ ಅದೇ ತಪ್ಪನ್ನು ಆಚರಿಸುತ್ತಿತ್ತು. ತಪ್ಪಿನ ನೆಪ್ಪು ಬಂದಾಗ ಹೃದಯ ವಿಹ್ವಲವಾಗಿ ರೋಷ ಕ್ರೋಧಗಳಿಗೆ ಎಡೆಕೊಡುತ್ತಿತ್ತು. ಸಹನೆ ಶೂನ್ಯವಾಗುತ್ತಿತ್ತು. ಕ್ರಾಂತಿಯ ಕರಾಳಸ್ವರೂಪ ಎದುರುನಿಂತು ಬಸವಣ್ಣನವರ ಬಾಯಲ್ಲಿ ಕ್ರೂರನುಡಿಗಳನ್ನಾಡಿಸುತ್ತಿತ್ತು.

“ನೀನಿಲ್ಲದನ್ಯ ದೈವ ಉಂಟೆಂಬವನ ಬಾಯಿ ಕೆನ್ನೆವಾರೆ ಸೀಳಿದನಲ್ಲದೆ
ಎನ್ನ ಮುನಿಸು ಹೋಗದಯ್ಯ, ಎನ್ನ ಕೋಪವಡಗದಯ್ಯ.
ಎನ್ನ ಬಿನ್ನಪವನವಧರಿಸು ಕೂಡಲ ಸಂಗಮದೇವಾ.”
“ಬಡ ಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬಿಡ

ಮಾಲೆಗಾರನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ.
ಬಣಜಿಗನೇಸು ಭಕ್ತನಾದರೆಯೂ ಬಟ್ಟಲ ಬೆನಕನ ಹಂಗ ಬಿಡ.
ನಾನಾವ ಹಂಗಿನವನಲ್ಲ.
ನಿಮ್ಮ ಶರಣರ ಹಂಗಿನವನಯ್ಯಾ ಕೂಡಲ ಸಂಗಮದೇವಾ."
"ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು
ಉದ್ಧರಿಸುವನೊಬ್ಬ ಶಿವಶರಣ ಸಾಲದೇ ?
ನಾರಾಯಣ ವೃದ್ಧಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ದಾನವ ಬೇಡಿದ.
ಕೊಟ್ಟು ಬಲಿ ಬಂಧನಕ್ಕೆ ಸಿಕ್ಕಿದ
ಈಶ ಜಂಗಮನಾಗಿ ಬಂದು, ದಾಸನ ವಸ್ತ್ರವ ಬೇಡಿದ
ಕೊಟ್ಟ ದಾಸ ತವನಿಧಿಯ ಪಡೆದ.
ಕಪಟದಿಂದ ನಾರಾಯಣ ಹಾರುವನಾಗಿ ಬಂದು,
ಕರ್ಣನ ಕವಚವ ಬೇಡಿದ,
ಕೊಟ್ಟ ಕರ್ಣ, ಕಳದಲ್ಲಿ ಮಡಿದ.
ಕಾಮಾರಿ ಜಂಗಮನಾಗಿ ಬಂದು, ಸಿರಿಯಾಳನ ಮಗನ ಬೇಡಿದ
ಕೊಟ್ಟ ಸಿರಿಯಾಳ ಕಾಂಚಿಯಪುರವ ಕೈಲಾಸಕೊಯ್ದ
ನಾರಾಯಣ ಹಾರುವನಾಗಿ ಬಂದು, ನಾಗರ್ಜುನನ ಶಿರವ ಬೇಡಿದ
ಕೊಟ್ಟ ನಾಗರ್ಜುನನ ಸಿರ ಹೋಯಿತ್ತು.
ಶಿವನು ಜಂಗಮನಾಗಿ ಬಂದು, ಸಿಂಧುಬಲ್ಲಾಳನ ವಧುವ ಬೇಡಿದ
ಕೊಟ್ಟ ಸಿಂಧುಬಲ್ಲಾಳ ಸ್ವಯಂ ಲಿಂಗವಾದ
ಇದು ಕಾರಣ ಇಲ್ಲಿಯೂ ಲೇಸು, ಅಲ್ಲಿಯೂ ಲೇಸು, ಕೂಡಿರೆ ನಮ್ಮ
ಕೂಡಲಸಂಗನ ಶರಣರಿಗೆ."
"ಹರಿಹರನೊಂದೇ ಎಂದರೆ ಸುರಿಯವೇ ಬಾಯಲ್ಲಿ ಬಾಲಹುಳುಗಳು ?
ಹರಿಗೆ ಹತ್ತು ಪ್ರಳಯ, ಬ್ರಹ್ಮಂಗನಂತ ಪ್ರಳಯ,
ಹರಂಗೆ ಪ್ರಳಯವುಂಟೆಂಬುದ ಬಲ್ಲರೆ ನೀವು ಹೇಳಿರೋ ?
ಪ್ರಳಯ ಪ್ರಳಯ ಆದಂದಿಗೆ ಹಳೆಯ ನಮ್ಮ ಕೂಡಲಸಂಗಮದೇವ."
"ನಾರಾಯಣನೆಂಬುವನ ಕಾಣೆ, ಗಿರಾಯಣನೆಂಬುವನ ಕಾಣೆ
ಬೊಮ್ಮನೆಂಬುವನ ಕಾಣೆ, ಬೊಮ್ಮಗನೆಂಬುವನ ಕಾಣೆ
ವಿಷವಟ್ಟೆ ಸುಡುವಲ್ಲಿ, ವೀರಭದ್ರ ಬಡಿವಲ್ಲಿ ಕೂಡಲಸಂಗಯ್ಯಂಗೆ
ಶರಣೆಂದು ಮೊರೆಯಿಟ್ಟವರೆಲ್ಲರು."
"ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ
ಜಿನ್ನನ ಪೂಜಿಸಿ ಬತ್ತಲೆ ಇಪ್ಪುದ ಕಂಡೆ.



ಮೈಲಾರ ಪೂಜಿಸಿ ನಾಯಾಗಿ ಬೊಗಳುವದ ಕಂಡೆ
ನಮ್ಮ ಕೂಡಲಸಂಗನ ಶರಣರ ಪೂಜಿಸಿ ದೇವಭಕ್ತನೆನಿಸಿಕೊಂಬುದ ಕಂಡೆ."
"ಏನಯ್ಯ, ವಿಪ್ರರು ನುಡಿದಂತೆ ನಡೆಯರು ಇದೆಂತಯ್ಯ ?
ತಮಗೊಂದು ಬಟ್ಟೆ, ಶಾಸ್ತ್ರಕ್ಕೊಂದು ಬಟ್ಟೆ,
ಕೂಡಲಸಂಗಮದೇವಯ್ಯ ಹೊಲೆಯರ ಬಸಿರಲ್ಲಿ ವಿಪ್ರರು ಹುಟ್ಟಿ
ಗೋಮಾಂಸವ ತಿಂಬರೆಂಬುದಕ್ಕೆ ಇದೆ ದೃಷ್ಟ."

ರೂಢಿಯ ಮೌಢ್ಯ ಬಸವಣ್ಣನವರಿಗೆ ತಲೆಬೇಸರವನ್ನುಂಟುಮಾಡಿತ್ತು. ಹೊಸ ಧರ್ಮದ ಉಷಃಕಿರಣ ಅವರ ದೇಹದಲ್ಲಿ ಕಾವನ್ನೂ ಕೆಚ್ಚನ್ನೂ ಮೂಡಿಸಿತ್ತು. ಜಗತ್ತಿನ ವರ್ತನೆಯನ್ನು ಕಂಡು ಸಹಿಸಲಾಗದಂತಹ ವೇದನೆ. ಪ್ರೇಮ ಶರಣಗಳ ಬುನಾದಿಯಾಗುಳ್ಳ ಹೃದಯದಿಂದ ಕಿಡಿಹಾರುತ್ತಿದೆ. ಅಸಹನೆ ಅಕಾಂಡತಾಂಡವವಾಡುತ್ತಿದೆ. ವಿಪ್ರರಲ್ಲಿಯೇ ಹುಟ್ಟಿ ಅವರ ರೀತಿನೀತಿಗಳನ್ನು ಚೆನ್ನಾಗಿ ಬಲ್ಲವರಾಗಿದ್ದ ಬಸವಣ್ಣನವರು ತಮ್ಮ ಶಸ್ತ್ರಾಸ್ತ್ರಗಳನ್ನು ವಿಪ್ರರಮೇಲೆ ಹೆಚ್ಚಾಗಿ ಪ್ರಯೋಗಿಸಿದ್ದಾರೆ. ಪ್ರತಿಯೊಬ್ಬ ಧರ್ಮೋದ್ಧಾರಕನ ಜೀವನದಲ್ಲಿಯೂ ಇಂತಹ ಘಟ್ಟಗಳನ್ನು ನಾವು ಕಾಣುತ್ತೇವೆ. ಪರಮದಯಾಳುವಾದ ಯೇಸು ಚಾವಟಿ ಹಿಡಿದು ದೇವಾಲಯದ ಮುಂದಿದ್ದ ಹೀನ ವ್ಯಾಪಾರಸ್ಥರನ್ನು ಬಡಿದು 'ನಾನು ವಿನಾಶದ ಪ್ರವಾದಿಯಾಗಿ ಬಂದಿದ್ದೇನೆ' ಎಂದು ಘೋಷಿಸಬೇಕಾಯಿತು. ಪೈಗಂಬರ್ ಮಹಮದರು ಯುದ್ಧಮಾಡಿ ತಮ್ಮ ಕೃಪಾಣಕ್ಕೆ ಹಲವಾರು ಜನರನ್ನು ಬಲಿಕೊಡಬೇಕಾಯಿತು. ಬಸವಣ್ಣನವರು ಈ ಸ್ಥಿತಿಯಲ್ಲಿನ್ನೂ ಸಾಧಕತೆಯ ಶೈಶವಾವಸ್ಥೆಯನ್ನು ದಾಟಿಲ್ಲ. ವಿಚಾರ ತನ್ನ ರುದ್ರಲೀಲೆಯನ್ನಾಡುತ್ತಿದೆ, ಅನುಭಾವ ಹೃದಯದಲ್ಲಿ ಸುಳಿದಿಲ್ಲ. ಮುಂದೆ ಬಾಳು ಹದನಾಗುತ್ತ, ಲೋಕದ ಅಜ್ಞಾನ ಅಪಕ್ವತೆಗಳಿಗೆ ಕಾರಣಗಳು ವೇದ್ಯವಾಗತ್ತ, ಹೊರತೆಗೆದ ಕಣ್ಣು ಒಳಮುಖವಾಗುತ್ತ ಅನುಭಾವದ ಹಾದಿಯ ಅರಿವಾಗುತ್ತದೆ. ಲೋಕದ ನಡತೆಯನ್ನು ತಿದ್ದಹೋಗುವ ಮುನ್ನ ವ್ಯಕ್ತಿ ತನ್ನ ತಾನರಿಯಬೇಕು, ತನ್ನ ಡೊಂಕನ್ನು ತಿದ್ದಿಕೊಳ್ಳಬೇಕು.

"ನ್ಯಾಯನಿಷ್ಠುರಿ, ದಾಕ್ಷಿಣ್ಯಪರ ನಾನಲ್ಲ
ಲೋಕವಿರೋಧಿ, ಶರಣನಾರಿಗಂಜುವನಲ್ಲ
ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ."
ಎಂದು ನುಡಿದ ಬಸವಣ್ಣನವರೇ,
"ಲೋಕದ ಡೊಂಕ ನೀವೇಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ"

ಎಂದು ಹೇಳುವಷ್ಟು ದೂರ ಹೋಗುತ್ತಾರೆ.

ಬಸವಣ್ಣನವರ ಸಂಸಾರವೂ ಬೆಳೆಯುತ್ತದೆ. ಈ ವೇಳೆಗಾಗಲೇ ಅಕ್ಕ ನಾಗಮ್ಮ, ಆಕೆಯ ಪತಿ ಶಿವಸ್ವಾಮಿ ಮತ್ತು ಕುಮಾರ ಚನ್ನಬಸವ ಬಂದು ಬಸವಣ್ಣನಲ್ಲಿಯೇ ನೆಲಸಿರುತ್ತಾರೆ. ದಾಸೋಹಕ್ಕೆ ಬರುವ ಸಹಸ್ರಾರು ಜಂಗಮರು ಬಸವಣ್ಣನವರ ಸಂಸಾರದವರಂತೆಯೇ ಆಗಿರುತ್ತಾರೆ. ಬಿಜ್ಜಳರಾಯನಂತೂ ಬಸವಣ್ಣನವರಲ್ಲಿ ಸೋದರವಾತ್ಸಲ್ಯದಿಂದ ವರ್ತಿಸುತ್ತಿರುತ್ತಾನೆ. ತಮ್ಮ ಭಾವಬಾಂಧವ್ಯವನ್ನು ಜೀವ ಬಾಂಧವ್ಯದಲ್ಲಿ ಬೆಸುಗೆ ಹಾಕಲಿಚ್ಛಿಸಿ ಬಿಜ್ಜಳ ದಣ್ಣಾಯಕ ಸಿದ್ಧರಸನ ಮಗಳಾದ ನೀಲಲೋಚನೆಯನ್ನು ಬಸವಣ್ಣನವರಿಗೆ ವಿವಾಹಮಾಡಿಸಲೇರ್ಪಡಿಸುತ್ತಾನೆ. ಬಿಜ್ಜಳನ ತಂದೆಯ ಸಂಗಡ ತಾಯಿ ಸಹಗಮನ ಮಾಡಿಕೊಂಡಾಗ ಅವನ ತಮ್ಮ ಕರ್ನಿದೇವ ಇನ್ನೂ ಮಗುವಾಗಿದ್ದ ಅವನನ್ನು ಸಿದ್ಧರಸನ ಸತಿ ಪದ್ಮಗಂಧಿ ಸಾಕಿ ಸಲಹಿದಳು. ಈ ಉಪಕಾರ ಸ್ಮರಣೆಯಿಂದ ಬಿಜ್ಜಳ ಸಿದ್ಧರಸನ ಮಗಳಾದ ನೀಲಲೋಚನೆಯನ್ನು ತನ್ನ ತಂಗಿಯೆಂದು ಭಾವಿಸಿ ನಡೆಸಿಕೊಳ್ಳುತ್ತಿದ್ದ. ತನ್ನ ತಂಗಿಗೆ ಸಕಲ ಸದ್ಗುಣಮಣಿಯಾದ ಬಸವಣ್ಣನವರೇ ತಕ್ಕ ಪತಿಯೆಂದು ಭಾವಿಸಿ ಅವರ ವಿವಾಹಕ್ಕೆ ವ್ಯವಸ್ಥೆಮಾಡುತ್ತಾನೆ. ಬಸವನ ಜೀವನ ಚಂದ್ರಿಕೆಗೆ ಈ ನೀಲಕಮಲ ವಿಶೇಷ ಶೋಭೆಯನ್ನುಂಟುಮಾಡುತ್ತದೆ. ಗಂಡನ ಸರಿದೊರೆಯಾಗಿ ನೀಲಮ್ಮ ಶರಣರ ಕೈಂಕರ್ಯವನ್ನು ನಿರ್ವಹಿಸುತ್ತಾಳೆ. ಸುಖದಲ್ಲಿ ದುಃಖದಲ್ಲಿ ಗಂಡನ ಸಹಧರ್ಮಿಣಿಯಾಗಿ ಅವನ ಬಾಳಬಳ್ಳಿ ಚಿಗುರಿ, ಹೂತು ಫಲಿಸುವಂತೆ ಮಾಡುತ್ತಾಳೆ.

## ಸಂಸಾರ ನಿರಸನ

ಬಸವಣ್ಣನವರ ಜೀವನ ತುಂಬಿತ್ತು. ಸಂಪತ್ತು, ಅಧಿಕಾರ, ಕೀರ್ತಿಪ್ರಿಯರಾದ ಪರಿಜನ, ಪ್ರತ್ಯಕ್ಷದೇವತೆಯೆಂದು ಭಾವಿಸುವ ಪ್ರಭು, ಗಂಗೆ ಗೌರಿಯರಂತಹ ಸತೀರತ್ನಗಳು; ಕೈಯೆತ್ತಿ ಮುಗಿಯುವ ಪ್ರಜಾಸಂಕುಲ. ಈ ಯೆಲ್ಲ ವೈಭವ, ಯಶಸ್ಸುಗಳಲ್ಲಿ ತೃಪ್ತರಾದ ಬಸವಣ್ಣನವರು ಸುಖವಾಗಿ ಜೀವನವನ್ನು ಸಾಗಿಸಬಹುದಾಗಿತ್ತು. ಕಣ್ಣಿಗೊಪ್ಪುವ ನೋಟಗಳನ್ನು ನೋಡಿಕೊಂಡು, ಜಿಹ್ವೆ ಬಯಸುವ ರಸತಿನಿಸುಗಳನ್ನು ಭುಂಜಿಸಿಕೊಂಡು, ಸ್ವಸುಖವನ್ನೇ ಜೀವನದ ಗತಿಗಮ್ಯಮಾಡಿಕೊಂಡು ಬಾಳಬಹುದಾಗಿತ್ತು; ಅರಮನೆಯ ಆಲಸ್ಯ, ಸುಖಸುಷುಪ್ತಿಯಲ್ಲಿ ಲೋಕವನ್ನು ಕಡೆಗಾಣಿಸಬಹುದಾಗಿತ್ತು. ಆದರೆ ಈ ಸುಖ ಅವರಿಗೆ ಹೇಯವಾಗಿ ಕಂಡುಬಂತು; ಈ ಬಾಳು ಬೇಸರವಾಯಿತು; ಈ ಬದುಕು ನಿರರ್ಥಕವೆಂದೆನಿಸಿತು; ಸಂಸಾರ ಕುತ್ತಾಯಿತು. ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗುವುದಕ್ಕೆ ಆರಂಭಿಸಿತ್ತು. ಈ ಸಂಸಾರ ಸಂಗ ಹಾವು-ಹಾವಾಡಿಗನ ಸ್ನೇಹವಿದ್ದಂತೆ, ಶೂಲದ ಮೇಲಣ ವಿಭೋಗವಿದ್ದಂತೆ, ಅದಕ್ಕೆ ಆಶಿಸುವುದು ತಾಳೆಮರಕ್ಕೆ ಕೈಯ್ಯನೀಡಿ, ಮೇಲೆ ನೋಡಿ ಗೋಣು



ನೋಯಿಸಿಕೊಂಡಂತೆ. ಸಂಸಾರವೆಂಬ ಸರ್ಪದಂಶನದಿಂದ ಪಂಚೇಂದ್ರಿಯಗಳೂ ವಿಷಮಯವಾಗುತ್ತದೆ. ಅದು ಮನುಷ್ಯನ ಧೃತಿಗೆಡಿಸಿ,

"ಇಂದಿಗೆಂತು, ನಾಳಿಗೆಂತು ಎಂದು ಬೆಂದೊಡಲ ಹೊರೆಯ  
ಹೋಯಿತೆನ್ನ ಸಂಸಾರ.  
ಹಿಂದೆ ನಾನಾ ಯೋನಿಯಲ್ಲಿ ಬಂದೆನೆಂಬ ಹೇಯವಿಲ್ಲ.  
ಮುಂದೆ ಮುಕ್ತಿಯಾಗಬೇಕೆಂಬ ಯುಕ್ತಿ ಇಲ್ಲ.  
ಎಂದೆಂದು ಸದಾಶಿವನ ನೆನೆಯಲೀಯದೆ ಕೊಂದುದಯ್ಯ ಈ ಮಾಯೆ  
ಕೂಡಲಸಂಗಮದೇವಾ."  
"ಆಶೆ ಎಂಬ ಪಾಶದಲ್ಲಿ ಭವಬಂಧನವಾಗಿರ್ದೆನಯ್ಯಾ  
ಸಕೃತು ನಿಮ್ಮನೆನೆಯಲು ಎನಗೆ ತೆರಹಿಲ್ಲಯ್ಯಾ  
ಕರುಣಾಕರ ಅಭಯಾಕರ ವರಧಾನಿ ಕರುಣಿಸಯ್ಯಾ  
ಸಂಸಾರ ಬಂಧನವನು ಮಾಣಿಸಿ ಎನಗೆ ಕೃಪೆಮಾಡಿ,  
ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು  
ಭಕ್ತಜನಮನೋವಲ್ಲಭ ಕೂಡಲಸಂಗಮದೇವಾ."

ಸಂಸಾರಸಂಗಕ್ಕೆ ಮೀಸಲಾದ ಮನಕ್ಕೆ ಯುಕ್ತಾಯುಕ್ತ ಪರಿಜ್ಞಾನ, ಶಾಂತಿ, ಸ್ಥೈರ್ಯಗಳು ಕಾಣೆಯಾಗುತ್ತವೆ. ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ ಅದರ ನಡೆ ಕೊಂಬೆಯಮೇಲಣ ಮರ್ಕಟನಂತೆ ನಿಂತಲ್ಲಿ ನಿಲ್ಲದೆ ಕುಳಿತಲ್ಲಿ ಕುಳ್ಳಿರದೆ ರೆಂಬೆ ರೆಂಬೆಗೆ ಲಂಘಿಸುವುದು. ತನ್ನಿಚ್ಛೆಯ ನುಡಿದರೆ ಅದಕ್ಕೆ ಮೆಚ್ಚುಗೆ, ವಿವೇಚನೆಯ ಹೆಬ್ಬಾಗಿಲನ್ನು ತೋರಿದರೆ ಅದಕ್ಕೆ ಮೇರೆ ಮೀರಿದ ಕೋಪ.

ಸಂಸಾರ ವಿಕರ್ಷಕ ರೂಪವನ್ನು ತಳೆದು ಸಾಧಕನ ಮುಂದೆ ನಿಲ್ಲುವುದಿಲ್ಲ ಅದು ತನ್ನ ನಿಜರೂಪವನ್ನು ಮರೆಮಾಚಿ ಅತ್ಯಂತ ಆಹ್ಲಾದಕರವಾದ ಸುಂದರ ರೂಪು ತಾಳಿ ನಿಲ್ಲುತ್ತದೆ. ಈ ಮಾಯಾಮಾನಿನಿ ತನ್ನ ಅತ್ಯಂತ ಬಿನ್ನಾಣ ಬೆಡಗುಗಳನ್ನು ಬೀರಿ ಸಾಧನವನ್ನು ಕೈವಶ ಮಾಡಿಕೊಳ್ಳುತ್ತಾಳೆ. ಒಮ್ಮೆಲೇ ತನ್ನ ನಿಜರೂಪವನ್ನು ತೋರಿ ಆವನಿಗೆ ಬಗೆಬಗೆಯ ದುಃಖ ನೋವುಗಳನ್ನು ನೀಡುತ್ತಾಳೆ.

"ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ  
ಮೋಹಕ್ಕೆ ಮಗುವಾಗಿ ಹುಟ್ಟಿದಳು ಮಾಯೆ  
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ.  
ಇದಾವಾವ ಪರಿಯಲ್ಲಿ ಕಾಡಿತ್ತು ಮಾಯೆ  
ಈ ಮಾಯೆಯ ಕಳೆವರೆ ಎನ್ನಳವಲ್ಲ.  
ನೀವೇ ಬಲ್ಲಿರಿ ಕೂಡಲಸಂಗಮದೇವಾ."

"ನಾನೊಂದು ನೆನೆದರೆ ತಾನೊಂದ ನೆನೆವುದು
ನಾನಿತ್ತಲೆಳೆದರೆ ತಾನತ್ತಲೆಳೆವುದು
ತಾ ಬೇರೆ ಎನ್ನನಳಲಿಸಿ ಕಾಡಿತ್ತು
ತಾ ಬೇರೆ ಎನ್ನ ಬಳಲಿಸಿ ಕಾಡಿತ್ತು
ಕೂಡಲಸಂಗನ ಕೂಡಿಹೆನೆಂದರೆ ತಾನೆನ್ನ ಮುಂದುಗೆಡಿಸಿತ್ತು ಮಾಯೆ."

ಅಲ್ಪಮಾನವ ಈ ಮಹಾಶಕ್ತಿಯ ಮುಂದೇನು ಮಾಡಬಲ್ಲ? ಅವನ ಆಟ ಸಾಹಸಗಳೇನು ನಡೆದಾವು ಎಂಬ ಚಿತ್ತದಾಸ್ಯ ಸಹಜವಾಗಿ ಎಲ್ಲರಲ್ಲಿಯೂ ಮೂಡುತ್ತದೆ. ಆತ್ಮನ ಪ್ರಗತಿಯನ್ನು ತಡೆಗಟ್ಟುವ ಸಾಧನವೇ ಈ ಚಿತ್ತದಾಸ್ಯ. ನಾನೇನು ಮಾಡಬಲ್ಲೆ ಎಂಬ ಕಲ್ಪನೆಗಿಂತಲೂ ಮಾಯಾಸಂಸಾರದ ಅಪ್ಸರ ವಿಲಾಸವನ್ನು ಮೆಚ್ಚಿಕೊಂಡು ಅದರಲ್ಲಿಯೇ ವಿಲೀನನಾಗುವ ಮಾನವನಿಗಂತೂ ಮುಕ್ತಿಯೇ ಇಲ್ಲ. ಇದು ಅವನಿಗೆ ರಸ, ಉಳಿದದ್ದು ವಿರಸ. ಸಂಸಾರ ಬಸವಣ್ಣನವರನ್ನು ಕಾರ್ಮೋಡಗಳಂತೆ ಆಚ್ಛಾದಿಸಿದ್ದರೂ ಅವರು ತಮ್ಮ ಸ್ವರೂಪ ಜ್ಞಾನವನ್ನು ತೋರಿಸಿಕೊಟ್ಟಿರಲಿಲ್ಲ. ದುರ್ಬಲ ಮನಸ್ಸು ಈ ಪ್ರಬಲ ಶಕ್ತಿಯ ಮುಂದೆ ಝರ್ಝರಿತವಾಯಿತು. ಕ್ಷಣಕಾಲ ಮಾಯೆಯೇ ಶಾಶ್ವತ ಸುಖದ ಬುನಾದಿಯೆಂಬ ಮಂಕು ಮುಸುಕಿತು. ಆದರೆ ಕ್ಷಣನಿದ್ರೆಯಲ್ಲಿ ಮಲಗಿದ್ದ ಸಿಂಹ ಎಚ್ಚೆತ್ತು ಕುಳಿತುಕೊಂಡಿತು. ಮಲಗಿದ್ದ ಗಲಿವರನನ್ನು ಸಹಸ್ರಾರು ವಾಮನ ಮೂರ್ತಿಗಳು ಕಟ್ಟಿಹಾಕಿದ್ದಂತೆ ಸಿಂಹವೂ ತನ್ನ ಅಸಹಾಯತೆಯನ್ನರಿಯಿತು. ಅದರ ಒಂದೇ ಊರುಗೋಲೆಂದರೆ ಇದು ಮಾಯಾವಿಭ್ರಮ, ಇದಕ್ಕತೀತವಾದ, ಸ್ಥಿರವಾದ, ಅಮರವಾದ ಬಾಳು, ಲೋಕ ಬೇರೊಂದಿದೆ ಎಂಬ ತತ್ವದಲ್ಲಿ ದೃಢವಿಶ್ವಾಸ. ತಮ್ಮ ಈ ಸ್ಥಿತಿಯನ್ನು ಬಸವಣ್ಣನವರು ಕೆಸರಿನಲ್ಲಿ ಬಿದ್ದ ಪಶುವಿನಂತೆ ಆನು ದೆಸೆದೆಸೆಗೆ ಬಾಯಬಿಡುತ್ತಿದ್ದೆನಯ್ಯಾ, ಬಡ ಪಶು ಪಂಕದಲ್ಲಿ ಬಿದ್ದರೆ ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ? ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ, ಅಂಬಾ ಎಂದು ಕರೆವುತ್ತಲಿದ್ದೇನೆ, ಅಂಬಾ, ಅಂಬಾ ಎಂದು ಒರಲುತ್ತಲಿದ್ದೇನೆ ಎಂದು ವರ್ಣಿಸಿದ್ದಾರೆ. ವಿಷಯವೆಂಬ ಹಸುರನ್ನು ಬಡ ಪಶುವಿನ ಮುಂದೆ ತಂದು ಪಸರಿಸಿದರೆ ಅದೇನು ಮಾಡಬಲ್ಲದು; ಹಸುರೆಂದೆಳಸಿ ಅದನ್ನೇ ಮನದಣಿಯೆ ಮೇಯುತ್ತದೆ. ಕಾಳಗವು ಸಮಾನ ಶಕ್ತರಲ್ಲಿ ನಡೆದಿಲ್ಲ. ಆನು ಒಬ್ಬನು, ಸುಡುವರೈವರು, ಮೇಲೆ ಕಿಚ್ಚು ಘನ ನಿಲ್ಲಲು ಬಾರದು. ಕಾಡ ಬಸವನ ಹುಲಿ ಕೊಂಡೊಯ್ವರೇ? ಸಾಧಕ ಸ್ಥಿತಿಯಲ್ಲಿ ಅರುಣೋದಯವಾಗುತ್ತದೆ, ಹರಕರು-ಣೋದಯವಾದಂತೆ! ನಮ್ಮ ಮೇಲೆ ನಿಂತು ಈ ನಾಟಕವನ್ನು ಒಬ್ಬ ಆಡಿಸುತ್ತಿದ್ದಾನೆ. ಅವನು ನಮ್ಮನ್ನು ಪರೀಕ್ಷೆ ಮಾಡುತ್ತಿದ್ದಾನೆ, ಮನುಷ್ಯನಿಗೆ ವಿವೇಕೋದಯವಾಗಲೆಂದು ಅವನನ್ನು ನಾನಾ ಪರಿಸ್ಥಿತಿಗೆ ಸಿಲುಕಿಸಿ ಅರೆದು, ಒರೆದು, ಜರಿದು ನೋಡುತ್ತಾನೆ. ಜಗನ್ನಾಟಕ ಸೂತ್ರಧಾರಿಯಾದ ಆ ಅವ್ಯಕ್ತಮೂರ್ತಿಯನ್ನು ಕುರಿತು,



"ಮುನಿದೆಯಾದೊಡೆ ಒಮ್ಮೆ ಜರಿದೊಡೆ ಸಾಲದೆ?
ಅಕಟಕಟಾ ಮದನಂಗೆ ಮಾರುಗೊಡುವರೇ?
ಹಗೆಗೆ ಮಾರುಕೊಟ್ಟು ನಿನ್ನವರನ್ನೊಪ್ಪಿಸುವರೇ ಕೂಡಲ ಸಂಗಮದೇವಾ!"

ನೀನು ಹುಟ್ಟಿಸಿದಲ್ಲಿ ಹುಟ್ಟಿ, ನೀನು ಕೊಂದಲ್ಲಿ ಸಾಯುವವನು ನಾನು. ನನ್ನ ಯೋಗಕ್ಷೇಮ, ಹಾನಿವೃದ್ಧಿ, ಮಾನಾಪಮಾನ, ಎಲ್ಲವೂ ನಿನ್ನದು. ಬಳ್ಳಿಗೆ ಕಾಯಿ ಭಾರವೇ? ನನ್ನನ್ನು ಪರೀಕ್ಷಿಸುವುದರಿಂದ ನಿನಗಾಗುವ ಲಾಭವೇನು?

ಪ್ರಪಂಚದ ಘರ್ಷಣೆಯಿಂದ ಭಕ್ತನಲ್ಲಿ 'ನಾನು-ತನ' ಅಳಿಯುತ್ತ ಬಂದಿದೆ. ತನ್ನ ಜೀವಸೂತ್ರಗಳನ್ನಾಡಿಸುವ ಪರಮ ಪುರುಷನಿಗೆ ಶರಣು ಹೋಗಬೇಕು. ಅವನ ಕರುಣೆಯ ಬಲದಿಂದ ಮಾಯಾ ರಕ್ಕಸಿಯನ್ನು ಎದುರಿಸಿ ಓಡಿಸಬೇಕೆಂಬ ತಿಳಿವು ಹುಟ್ಟಿದೆ. ನನಗೆ ರಾಜ್ಯ ಕೊಡು, ಐಶ್ವರ್ಯ ಕೊಡು, ಮಡದಿ ಮಕ್ಕಳನ್ನು ಕೊಡು ಎನ್ನುವ ಪ್ರಾರ್ಥನೆ ಬೇರೆ ಸ್ವರೂಪವನ್ನು ತಳೆಯುತ್ತದೆ.

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ
ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು
ಕೂಡಲ ಸಂಗಮ ದೇವಾ."

"ನರವಿಂಧ್ಯೆಯೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ
ಶಿವ ಶಿವಾ ಎಂದೋದಿಸಯ್ಯ
ಭಕ್ತಿ ಎಂಬ ಪಂಜರದೊಳಿಕ್ಕಿ ಸಲಹು ಕೂಡಲ ಸಂಗಮದೇವಾ."

ಮನದ ಸಂದೇಹ ಹಿಂಗಬೇಕಾಗಿದೆ. ಪಂಚೇಂದ್ರಿಯ ಧಾತುವಿನಿಂದ ಭಕ್ತ ವಿಕಳನಾಗಿದ್ದಾನೆ, ಮನದ ವಿಕಾರದಿಂದ ಮತಿಗೆಟ್ಟಿದ್ದಾನೆ, ಕಾಮ ವಿಕಾರದಿಂದ ಧೃತಿಗೇಡಿಯಾಗಿದ್ದಾನೆ. ಈ ಆಧಿವ್ಯಾಧಿಗಳನ್ನು ನಿವಾರಿಸುವಂತೆ ಪರಮ ಧನ್ವಂತರಿಯ ಮೊರೆಹೊಕ್ಕು ನನ್ನನ್ನು ರಕ್ಷಿಸು, ನನ್ನನ್ನು ಕಾಪಾಡು ಎಂದು ಮೊರೆಯಿಡುತ್ತಿದ್ದಾನೆ.

"ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ
ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ
ಓ ಎನ್ನಲಾಗದೆ ಅಯ್ಯ, ಆವಾಗಲೂ ನಿಮ್ಮನ್ನು ಕರೆವುತ್ತಲಿದ್ದೇನೆ
ಓ ಎನ್ನದೆ ಮೌನವೇ, ಕೂಡಲ ಸಂಗಮದೇವಾ."

ನಾನೆಷ್ಟರವನು. ನಿನ್ನ ವಿರೋಧಕ್ಕೆ ನಾನು ಸಲ್ಲುವೆನೇ? ಎನ್ನ ಮೊರೆಯ ಕೇಳು.

"ನೀನೊಲಿದರೆ ಕೊರಡು ಕೊನರುವುದಯ್ಯಾ
ನೀನೊಲಿದರೆ ಬರಡು ಹಯನವಹುದಯ್ಯಾ
ನೀನೊಲಿದರೆ ವಿಷವೆಲ್ಲ ಅಮೃತವಹುದಯ್ಯಾ
ನೀನೊಲಿದರೆ ಸಕಲ ಪಡಿಪದಾರ್ಥ ಇದಿರಲ್ಲಿಪ್ಪವು ಕೂಡಲ ಸಂಗಮದೇವಾ.

ಹರನ ಕಾರುಣ್ಯದಲ್ಲಿ ಭಕ್ತನಿಗೆ ಅಪಾರ ಅಸೀಮ ನಂಬಿಕೆಯಿದೆ. ಅದಕ್ಕೆ ತಾನು ಅರ್ಹನೆಂಬ ಆತ್ಮ ವಿಶ್ವಾಸವೂ ಮೂಡಿದೆ. ಆದರೆ ಹರನ ಹೃದಯದಲ್ಲಿ ಕರುಣೆ ಮೂಡುವುದಿಲ್ಲ. ಭಕ್ತ ನೊಂದು,

ಅಕಟಕಟ, ಶಿವ ನಿನಗಿನಿತು ಕರುಣವಿಲ್ಲ
ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ, ಪರಲೋಕ ದೂರನ!
ಏಕೆ ಹುಟ್ಟಿಸಿದೆ ಕೂಡಲ ಸಂಗಮದೇವ ಕೇಳಯ್ಯ
ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೆ?"

ಎಂದು ಕೇಳುತ್ತಾನೆ. ನಾನು ಗುಣಿಯೆಂದು ಕರುಣೆ ತೋರುವೆಯಾ, ಅವ-ಗುಣಿಯೆಂದು ನಿಷ್ಕರುಣಿಯಾಗುವೆಯಾ?

"ಮೇರು ಗುಣವನರಸುವುದೇ ಕಾಗೆಯಲ್ಲಿ?
ಪರುಷ ಗುಣವನರಸುವುದೇ ಕಬ್ಬುನದಲ್ಲಿ
ಸಾಧು ಗುಣವನರಸುವುದೇ ಅವಗುಣಿಯಲ್ಲಿ?
ಚಂದನ ಗುಣವನರಸುವುದೇ ತರುಗಳಲ್ಲಿ?
ಸರ್ವಗುಣ ಸಂಪನ್ನ ಲಿಂಗವೇ,
ನೀನೆನ್ನಲ್ಲಿ ಅವಗುಣವನರಸುವುದೇ ಕೂಡಲ ಸಂಗಮದೇವಾ."

ಸೂಫಿ ತತ್ವಜ್ಞಾನಿ ಉಮರ ಖಯ್ಯಾಮನೂ ಇದೇ ಪ್ರಶ್ನೆಯನ್ನೆತ್ತಿ 'ನನ್ನ ಸದ್ಗುಣಗಳಿಗೆ ನಿನ್ನ ಕೃಪೆ ಮೀಸಲಾದರೆ ಅದು ವಿನಿಮಯವಾಯ್ತು ನಿನ್ನ ಘನತೆ ಎಲ್ಲಿಂದ ಬಂತು' ಎಂದು ಏಡಿಸುತ್ತಾನೆ.

ಭಕ್ತನಿಗಿನ್ನೂ ಆತ್ಮಶೋಧಬುದ್ಧಿ ಹುಟ್ಟಿಲ್ಲ. ತಾನು ಕುಳಿತಲ್ಲಿಯೇ ಕುಳಿತು ಶಿವನನ್ನು ಅನ್ನಕೊಡು, ಬಟ್ಟೆಕೊಡು, ಮೋಕ್ಷಕೊಡು ಎಂದು ಕೇಳುವ ಸ್ಥಿತಿಯಲ್ಲಿಯೇ ಮನಸ್ಸು ಮುದುಡಿದೆ. ದಾನ ಸ್ವೀಕಾರಕ್ಕೆ ತಕ್ಕ ಅಧಿಕಾರ ಸಂಪಾದನೆಯ ಕಡೆಗೆ ಲಕ್ಷ್ಯ ಹೋಗಬೇಕಾಗಿದೆ. ತಾನು ಬೇಡುವ ವಸ್ತು ಅದೇ ಬಂದು ಮಡಿಲಿನೊಳಗೆ ಮಾಡಿಕೊಳ್ಳಬೇಕಾದುದು ಭಕ್ತನ ಧರ್ಮ. ಅನ್ನಕ್ಕೆ ಬೇಡುವುದು ಹೇಗೆ ಚಿತ್ತದಾಸ್ಯದ ಲಕ್ಷಣವೋ ಹಾಗೇ ಮೋಕ್ಷವನ್ನು ಯಾಚಿಸುವುದೂ ನೈಚ್ಯಾನುಸಂಧಾನದ ಪ್ರತೀಕವೆಂದು ಬಸವಣ್ಣನವರು ಸಕಾಲದಲ್ಲಿ ಅರಿತರು.

(ಮುಂದುವರಿಯುತ್ತದೆ.)



# ಗಮಕ ಪ್ರಚಾರ :—ಚಂಪೂ ಕಾವ್ಯಗಳು

## ಗಮಕಿ ಓರ್ವ ಶ್ರೇಷ್ಠ ಕಲೆಗಾರ:

ಮುಂದುವರಿದ ಲೇಖನ

—ಚನ್ನಪ್ಪ ಎರೇಸೀಮೆ

ವಿರೂಪಾಕ್ಷನೆಂಬ ಗಮಕಿ [8] ಹಳೇಬೀಡಿಗೆ ಬಂದು ಕೆರೆಯ ಪದ್ಮರಸನ ಎದುರಿನಲ್ಲಿ ರಾಘವಾಂಕನ ಸಿದ್ಧರಾಮಚಾರಿತ್ರ್ಯವೆಂಬ ಕಾವ್ಯವನ್ನು—

ಪುಸ್ತಕದೆಗೆದು ಮಧುರ ಮಂದರ ತಾರ। ವೆಂಬ ತ್ರಿವಿಧ ಸ್ಥಾನದಲ್ಲಿ ಸರಿಗಮಪದನಿ-।
ಯೆಂಬ ಸಪ್ತ ಸ್ವರಂಗಳಿಂಬುವಡೆಯಲು ಶುದ್ಧ ಸಂಕೀರ್ಣ ಸಾಳಗಂಗಳಿಂ॥
ಸಂಭಾವನಂ ಬಡೆಯು ರಾಗಂಗಳು ನಾದಮಯ।ವೆಂಬುದಂ ವಿಸ್ತರಿಸಲೋದ
ತೊಡಗಿದನದೇ।
ನೆಂಬೆನಿನಿರಸದ ಸೊಬಗಿನ ಸೋನೆಗರೆವಂತೆ ಸಕಲರುಂ ಮೂರ್ಚ್ಛೆಯಾಗೆ॥

(ರಾಘವಾಂಕ ಚಾರಿತ್ರ-೧೬-೧೨)

ಆದಿ ಸತ್ರಮಚ್ಛೇಂದ್ರ ಸಿದ್ಧರಾಮನ ಕಥೆಯ। ಮಾದೇವ ಚಕ್ರೇಶ ನೋಡುತಿರೆ ಪದ್ಮರಸ
ನಾದರದಿ ವಾಕ್ಚತುರತಾ ವಿಸ್ತರಕೆ ಭಾವದ ಪದ ಹರವರಿಗೆ ಪಿರಿದು-।
ಮೋದದಿಂ ಪದಪದಕೆ ತಲೆದೂಗುವೊಲು ಗಾಣ-। ರೀದಿವ್ಯ ಗಾನನುಂ ಕೇಳ್ದರಿಯೆವೆನೆ ನಲಿಸಿ-।
ಯೋದಿ ಕೇಳಿಸುತೆ ಹಲಕೆಲವು ಪದಂಗಳು ನಡೆಯಲೋದಿಪಂ ಮತ್ತೊಂದನು॥

(ಅದೇ-೧೬-೧೩)

—ಹೀಗೆ ಓದಿ ಪದ್ಮರಸನ ಮನಸ್ಸನ್ನೇ ಸೂರೆಗೊಂಡನಂತೆ. ನಾದಲೋಲನಾದ ಲಕ್ಷ್ಮೀಶ. ಒಳ್ಳೆಯ ಗತ್ತುಗಾರನಾದ ಹರಿಹರ ಇಬ್ಬರೂ ಮಹಾ ಕವಿಗಳಾಗಿದ್ದಂತೆ ಶ್ರೇಷ್ಠ ಗಮಕಿಗಳೂ ಆಗಿರಬೇಕೆಂದು ಊಹಿಸಲಿಕ್ಕೆ ಅವರ ಕಾವ್ಯಗಳು ನಮಗೆ ಸುಳುಹು ಕೊಡುತ್ತವೆ. ಅಂದಿನ ಜನತೆ ಗಮಕಿಗಳನ್ನು ಬೆಳೆಸಿದರು; ಗಮಕಿಗಳೂ ಬೆಳೆದರು. ಪುಂಖಾನು ಪುಂಖವಾಗಿ ಎಂಬಂತೆ ಹುಟ್ಟಿದ ಅನೇಕ ಬಗೆಯ ಛಂದಸ್ಸಿನ ಕಾವ್ಯಗಳನ್ನು ತಂಡ ತಂಡವಾಗಿ ಹುಟ್ಟಿದ ಗಮಕಿಗಳು ಹಾಡಿದರು; ಜನರ ಮನೋಭೂಮಿಕೆಯನ್ನು ಸಂಸ್ಕೃತಿ ಸಸ್ಯಾಢ್ಯವನ್ನಾಗಿಸಿದರು.

---

8. ಪಂಪಾಕ್ಷೇತ್ರದ ವಿರೂಪಾಕ್ಷನೇ ಗಮಕಿಯ ವೇಷದಲ್ಲಿ ಬಂದು ಕೆರೆಯ ಪದ್ಮರಸನ ಎದುರಿನಲ್ಲಿ ರಾಘವಾಂಕನ ಸಿದ್ಧರಾಮ ಚಾರಿತ್ರವನ್ನೋದಿದನೆಂಬುದು ಕವಿ ಕಲ್ಪನೆ. ಇದಕ್ಕೆ ಕಾರಣ ಬೇರೆ ಇದೆ. ಅದು ನಮಗೆ ಅಪ್ರಕೃತ.

## ಪ್ರಾಚೀನ ರಾಜಾಸ್ಥಾನದಲ್ಲಿ ಗಮಕಿಗಳು:

ಸಾಮಾನ್ಯವಾಗಿ ಹಿಂದಿನ ನಮ್ಮ ರಾಜಾಸ್ಥಾನಗಳಲ್ಲಿ 'ಕವಿಗಮಕಿವಾದಿವಾಗ್ಮಿಗಾಯಕ' ರೇ ಮೊದಲಾದ ಲಲಿತಕಲಾ ಪ್ರೌಢಿಮೆಯ ಜನಗಳು ರಾಜರನ್ನು ಸಭಾಸದರನ್ನು ಮೆಚ್ಚಿಸುವ ಕಾರ್ಯ ಮಾಡುತ್ತಿದ್ದರೆಂದು ಅನೇಕ ಕಾವ್ಯಗಳಲ್ಲಿ ವರ್ಣಿತವಾಗಿದೆ.

ಹರಿಹರ ಮಹಾಕವಿ ತನ್ನ ಗಿರಿಜಾಕಲ್ಯಾಣದಲ್ಲಿ ಇವರೆಲ್ಲರ ಲಕ್ಷಣವನ್ನೂ ಬೇರೆಬೇರೆಯಾಗಿಯೇ ಹೇಳಿದ್ದಾನೆ.[9] ಅಲ್ಲಿ,

ಆರಭಟೆಯೊಳ್ ದೆಖ್ಖಾಳರ ಮಿಳಿತ್ತ ಸಾತ್ವತಿಯೊಳ್ ಪಜ್ಜಳ, ಬೆತ್ತು ಭಾರತಿಯೊಳ್ ಕಾಂತಿ ಕೈಗಣ್ಮೆ ಆಸ್ಥಾನಮುಂ ಕೌತುಕರಸದೊಳ್ ಕರುವಿಟ್ಟಂತಿರಿಸುವಸಾಮರ್ಥ್ಯವನೊಳಕೊಂಡು ಕೈಶಿಕಿವರ್ಗಗಮಕಿಗಳಕಂಡ[10] ಎಂದಿದ್ದಾನೆ.

---

9 (i) ಕವಿ: ವಕ್ರೋಕ್ತಿ ಸ್ವಭಾವೋಕ್ತಿ ಸಾಕಲಾಲಿತ್ಯ ಗುಂಪು ಇಂಪು ರೀತಿ ನೂತನಮಾಗೆ ಗದ್ಯ ಪದ್ಯ ಕಳಾ ಪ್ರೌಢಿ ರೂಢಿವಡೆಯೆ ಮೆರೆದಿರ್ದ ಪರಸ ಕವಿಗಳಸಂದಣಿ...

(ii) ವಾದಿ: ಶಬ್ದ ಖಂಡನಮರ್ಥ ಖಂಡನಮನುಮಾನ ಖಂಡನಮೆಂಬ ತರ್ಕತಂತ್ರ ಕೋವಿದರಪ್ಪ ವಾದಿಗಳು.

(iii) ವಾಗ್ಮಿ: ಮಧುರ ರಸಮೊಸರ್ವ ಪೊಸ ನುಡಿಗಳಂ ಕೇಳ್ವ, ಸಭೆಗೆ ಕರ್ಣರಸಾಯನಮನೀವ, ಮಧುರಗುಣಂ ಮೆಯ್ಯಕ್ಕಿರ್ದ ವಾಗ್ಮಿಗಳ್.

(iv) ಗಾಯಕ: ಪಳಿವಕ್ತ್ರತೆಯಿನೀವ ಹವಣಿ ತರಂಗಿಸುವ ತಿರುವು ಸುಳಿಗೊಳ್ವ ಪೇವು ಇಂಪಂ ಕರೆವ ಸಂಧಾರಕಗಾನಂ ನಾನಾ ರಸದ ಲಹರಿಯ ರೂಪುವಡೆಯೆ ಪಾಡುವ ಗಾಯಕರು. (ಗಿ.ಕ. ೩-೧೦೫ ಗದ್ಯ ನೋಡಿ)

10. ಅಂದು ಗಮಕಿಗಳಿಗೆ ಹೇಳುತ್ತಿದ್ದ ಲಕ್ಷಣವನ್ನು ಇದರಿಂದ ತಿಳಿಯಬಹುದು. ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ವಸ್ತು ಕಾವ್ಯದ ಬಗೆಗೆ ಹೇಳುವ ವೃತ್ತಿಗಳು ನಾಲ್ಕು. ಗೀತ ನೃತ್ಯ ಶೃಂಗಾರ ವಿಲಾಸಗಳಲ್ಲಿ ಬರುವ ಕಾವ್ಯಾಂಶ ವರ್ಣನೆಯಿಂದಾಗುವ ಆನಂದವೇ ಕೈಶಿಕೀ. ಸತ್ವ, ಶೌರ್ಯ, ತ್ಯಾಗ, ದಯೆ, ಹರ್ಷಾದಿ ಕಾವ್ಯಾಂಶ ಪಠನದಿಂದುಂಟಾಗುವ ಚಿತ್ತವೃತ್ತಿಯ ಆನಂದವೇ ಸಾತ್ವತೀ. ಮಾಯೆ ಇಂದ್ರಜಾಲ, ಜಗಳ, ಕೋಪ, ಕಳವಳಿಕೆಗಳಿಂದ ಉದ್ಧತವಾಗಿರುವ ಕಾವ್ಯಾಂಶ ಪಠನದಿಂದಾಗುವ ಚಿತ್ತವೃತ್ತಿಯ ಆನಂದವೇ ಆರಭಟಿಯೆನಿಸುವುದು. ಎಲ್ಲ ರಸ ಪ್ರಸಂಗದಲ್ಲೂ ಅಪೂರ್ವ ಕಾಂತಿಯೇ ಭಾರತೀ ವೃತ್ತಿಯೆನಿಸುವುದು. ಸಾಮಾನ್ಯವಾಗಿ ವ್ಯಕ್ತಿ ವಿಷಯವಾದ ಈ ಲಕ್ಷಣವನ್ನು ಚಂಪೂ ಕಾವ್ಯಗಳಿಗೆ ಸಂಸ್ಕೃತ ಕಾವ್ಯಗಳಿಗೆ ಹೇಳುವ ರೀತಿಯಲ್ಲಿ ಹೇಳಲಾಗುತ್ತಿದೆ. ವೃತ್ತಿ ವಿಷಯದಲ್ಲಿ ಲಾಕ್ಷಣಿಕರು ವೈವಿಧ್ಯಮಯ ವ್ಯಾಖ್ಯೆಗಳನ್ನು ಕೊಡುತ್ತಾರೆ. ದಶರೂಪಕಕಾರನು 'ಪ್ರವೃತ್ತಿ ರೂಪೋ ನೇತೃವ್ಯಾಪಾರಸ್ವಭಾವೋವೃತ್ತಿಃ' ಎಂದರೆ ಕಾವ್ಯಮೀಮಾಂಸಾಕಾರನು 'ವಿಲಾಸವಿನ್ಯಾಸಕ್ರಮೋವೃತ್ತಿಃ' ಎನ್ನುತ್ತಾನೆ. (ನೋಡಿ. ಕನ್ನಡ ಕೈಪಿಡಿ ರಸಪ್ರದರ್ಶನ.)



ಈ ಕಲಾವಂತರೆಲ್ಲ ಪರಸ್ಪರ ಸಂಬಂಧವುಳ್ಳವರು. ಇಲ್ಲಿನ ಗಮಕಿ ತನ್ನ ಶಕ್ತಿ ಸಾಮರ್ಥ್ಯದಿಂದ, ಕಲಾ ನೈಪುಣ್ಯದಿಂದ, ಆಸ್ಥಾನವನ್ನೆಲ್ಲ ಕೌತುಕ ರಸದಲ್ಲಿ ಮುಳುಗಿಸಿ, ಕರುವಿಟ್ಟಂತಿರಿಸುವವನು, ನವರಸಾವಿಷ್ಕಾರಗೊಳಿಸಿ ಮೈ ಮನಗಳನ್ನು ಮರೆಸುವವನು. ಶ್ರೋತೃವಿನಲ್ಲಿ ಮನೋವಿಶುದ್ಧಿ ಬಲ ವೀರ್ಯಗಳನ್ನುಂಟುಮಾಡುವವನು.

## ಇಂದಿನ ಜನತೆಯಲ್ಲಿ ಗಮಕಿಯ ಸ್ಥಾನಮಾನಗಳೇನು?

ಇಂದು ಜನತೆಯಲ್ಲಿ ಜೀವನ ಸೌಂದರ್ಯ ಕುಸಿಯತೊಡಗಿದೆ. ಹೃದಯ ಶ್ರೀಮಂತಿಕೆ ಬರಡಾಗತೊಡಗಿದೆ. ಯೋಚನೆ ಯೋಜನೆಗಳು ಅರ್ಥಹೀನವಾಗತೊಡಗಿವೆ. ಭಾವಕೋಶದಲ್ಲಿ ಪ್ರಾಜ್ಞರು ಯಾವುದನ್ನು ಸಂಸ್ಕಾರವೆಂದು ಹೇಳುತ್ತ ಬಂದಿರುವರೋ ತದ್ಭಿನ್ನರಾದ ಅಸಂಸ್ಕಾರಗಳ ಸಂಗ್ರಹವಾಗುತ್ತಿದೆ. ಭಾವದಂತೆ ಸ್ವಭಾವ ರೂಪುಗೊಂಡು ಸಾಮಾಜಿಕ ಜೀವನದಲ್ಲಿ ಯಾವುದೋ ದೊಡ್ಡ ಅಭಾವ ಕಾಣುವಂತಾಗಿದೆ. ಪ್ರೌಢ ಸಾಹಿತ್ಯ ಕೃತಿಗಳಿಂದ ದೂರವಾದಂತೆ ಪ್ರೌಢ ಭಾವನಾ ವಿಶೇಷಗಳಿಂದಲೂ ದೂರ ಎಸೆಯಲ್ಪಡುತ್ತಿದ್ದೇವೆ. ಲಘು ಭಾವನಾ ವಿಶಿಷ್ಟ ಜನತೆಯ ಕ್ರಿಯೆಗಳೂ ಲಾಘವವಾದವುಗಳೇ ಎಂಬುದನ್ನು ಎಲ್ಲರೂ ಅರಿಯಬೇಕಾದುದು ಅವಶ್ಯ. ಶ್ರೇಷ್ಠ ಸಾಹಿತ್ಯ ಕೃತಿಗಳ ಮಟ್ಟಕ್ಕೆ ಜನತೆಯ ಮಟ್ಟವನ್ನೇರಿಸುವ ಕಾರ್ಯ ದಶದಿಕ್ಕುಗಳಿಂದ ನಡೆಯಬೇಕು. ಇಲ್ಲವೇ ದಿಕ್ಕುಗೆಟ್ಟು ಓಡಬೇಕು. ಜನತೆಯ ಮಟ್ಟಕ್ಕೇ ಕಾವ್ಯಗಳು ಇಳಿಯಬಾರದು. ಅಂಥ ಸಾಹಿತ್ಯ ಶಿರೋಹಣಗಿರಿಯೇರಿದಾಗಲೇ ಚಿಂತಾರತ್ನ ಲಾಭ. ಇಲ್ಲದಿದ್ದರೆ ಬರಡು ಭೂಮಿಯ ಕಲ್ಲು ಚೂರುಗಳ ಸಂಗ್ರಹ. ಮಹಾ ಕವಿಗಳ ಕಾವ್ಯ ಸಂಸ್ಕಾರ ಚಿಕ್ಕದಲ್ಲ. ಮಹಾಕವಿ ಹರಿಹರ ತನ್ನ ಗಿರಿಜಾ ಕಲ್ಯಾಣ ಮಹಾಕಾವ್ಯದ ಬಗೆಗೆ ಹೇಳುವ ಕವೀಶಾಧಿಪತ್ಯ ವೈಭವ ಕೇಳಿ:

ಕಾವ್ಯಂ ಸೌಖ್ಯಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ-।
ಗ್ದೇವ್ಯಾವಾಸಂ ವಿವೇಕೋನ್ನತ ಜನನಿಧಿ, ಸಂಸಾರ ವಿಶ್ರಾಮದೇಶಂ।
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತು ಕೇಳ್ವಳ್ತಿಯಿಂದಂ-।
ಕಾವ್ಯ ಕಲ್ಪಾಂತರ ಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ॥

ಈ ಮಾತುಗಳು ಎಲ್ಲ ಸತ್ಕಾವ್ಯಗಳಿಗೂ ಅನ್ವಯಿಸತಕ್ಕವು. ಇಂಥ ಸಾಹಿತ್ಯ ಸಾಮ್ರಾಜ್ಯ ಸಂಪತ್ತಿನ ಚಂಪೂಕಾವ್ಯಗಳ ಭದ್ರವಾದ ಕೋಟೆ ಕನ್ನಡವು. ಕಲ್ಪಾಂತ ಚಿರ ಸ್ಥಾಯಿತ್ವ ಪಡೆಯಬಲ್ಲ ಸತ್ವ ಭೂಯಿಷ್ಠವಾದದ್ದು. ಪಂಪ, ರನ್ನ, ಪೊನ್ನ, ನಯಸೇನ, ಜನ್ನ, ನಾಗಚಂದ್ರ, ಕರ್ಣಪಾರ್ಯ, ನೇಮಿಚಂದ್ರ, ರುದ್ರಭಟ್ಟ, ನಾಗವರ್ಮ, ಹರಿಹರ, ಸುರಂಗ, ಷಡಕ್ಷರದೇವ, ತಿರುಮಲಾರ್ಯ, ಬಸಪ್ಪಶಾಸ್ತ್ರಿ, ಕೊನೆ

ಯದಾಗಿ ಈ ಯುಗದ ಬಹು ದೊಡ್ಡ ಚಂಪೂಕವಿ ಗೌರೀಶಂಕರ ಸ್ವಾಮಿಗಳೇ ಮೊದಲಾದವರ ಶಾಸ್ತ್ರ ಪಾಂಡಿತ್ಯ ಲೌಕಿಕಪಾರ ಲೌಕಿಕಾನುಭವ, ಅಲಂಕಾರ ವೈಚಿತ್ರ್ಯ, ವ್ಯಾಕರಣಾಲಂಕಾರ, ಛಂದಶ್ಯಾಸ್ತ್ರ, ಜ್ಞಾನ, ವಿದ್ವತ್ತು, ಭಾಷಾಪ್ರಾಗಲ್ಭ್ಯ, ಉಭಯ ಭಾಷಾ- ಜ್ಞಾನ ಸಂಪದ, ಎಲ್ಲದಕ್ಕೂ ಮಿಗಿಲಾಗಿ ಸಮಕಾಲೀನ ಪ್ರಜ್ಞೆ, ಅನಂತ-ಪ್ರತಿಮಾಕಲ್ಪನೆ. ಶಬ್ಧ ಚಿತ್ರ, ಅರ್ಥವೈಚಿತ್ರ್ಯ, ಉಕ್ತಿ ಚಮತ್ಕೃತಿ, ಕಲ್ಪನಾಲೋಕದ ವಿಚಿತ್ರ ಶಾಬ್ಧಿಕಸೃಷ್ಟಿವೈಚಿತ್ರ್ಯ, ನಮ್ಮವರ ಇತಿಹಾಸ, ಸಂಸ್ಕೃತಿ, ಬಾಳು ಬದುಕು, ಬಂಹಗಳ ಸುಳುಹು ಹೊಳಹುಗಳು, ನಮ್ಮ ಜನಕ್ಕೆ ತಿಳಿಯದಿದ್ದರೆ ನಾವೆಂಥ ಕನ್ನಡಿಗರು. ಕಾಲಕಾಲಕ್ಕೆ ಈ ಸಂಪತ್ತಿನಿಂದ ದೂರ ಎಸೆಯಲ್ಪಟ್ಟ ನಾವು ನಾಡು- ನುಡಿ-ಸಂಸ್ಕೃತಿ – ಸಾಹಿತ್ಯ ಲೋಕಜ್ಞಾನದಿಂದ ಬರಡುಗೊಂಡು ಭಾಕಭೂಮಿಯೊಂದು ಪಾಳ್ನೆಲವಾಗುವುದರಲ್ಲಿ ಸಂಶಯವಿಲ್ಲ; ಅಂಥ ಪಾಳ್ನೆಲದಲ್ಲಿ ಬೆಳೆಯುವ ಬೆಳೆ ಗೊತ್ತೇ ಇದೆ, ಎಲ್ಲರಿಗೂ ಅಹಿತಕಾರಿ ಮುಳ್ಮರ, ಕುರುಚಲು ಗಿಡಗಂಟೆ, ಬೇಡವಾದ ಕಸದ ಕಸುರು. ಹೀಗಾಗದಂತೆ ಬೆಚ್ಚರ–ಎಚ್ಚರಗಳಿಗೆ ಈಗ ಸಕಾಲ. ಅಥವಾ ಕಾಲ ಮಿಂಚುತ್ತ ಬಂದಿದೆ ಎಂದರೂ ಅಡ್ಡಿಯಿಲ್ಲ.

ನಮ್ಮ ಚಂಪೂ ಸಾಹಿತ್ಯ ಕೃತಿಗಳ ಭಾಗ್ಯ ವಿಶೇಷವನ್ನು ದಶದಿಕ್ಕುಗಳಿಗೂ ಹರಡಿ ಜನಾಂಗದ ಭಾವಕೋಶವನ್ನು ಪ್ರಬುದ್ಧ ಸಂಸ್ಕಾರ ವಿಶೇಷಗೊಳಿಸಲು ಸಹಸ್ರಸಹಸ್ರ ಸಂಖ್ಯೆಯ ಪ್ರಬುದ್ಧ ಗಮಕಿಗಳ ಅಭಾವವಿದೆ, ರಸಿಕ ಜನದ ಕೊರತೆಯಿದೆ. ನಮ್ಮಲ್ಲಿ ಗಮಕಿಗಳು ಅಲ್ಲೊಬ್ಬರು ಇಲ್ಲೊಬ್ಬರಿರಬಹುದು. ಬಹಳಷ್ಟು ಜನ ಷಟ್ಪದಿ, ಸಾಂಗತ್ಯ, ಯಕ್ಷಗಾನದವರು ೬೦-೭೦ ವರ್ಷಗಳ ಹಿಂದೆ ರಾಜಶೇಖರವಿಳಾಸ–ಜಗನ್ನಾಥ ವಿಜಯ ಪಂಪಭಾರತದಂಥ ಚಂಪೂ ಕಾವ್ಯಗಳನ್ನು ಪರಿಣಾಮಕಾರಿಯಾಗಿ ಓದುವ- ಓದಿಸುವವರಿದ್ದರು. ವಿದ್ವಾಂಸರ ಗೋಷ್ಠಿಗಳಿದ್ದುವು, ಪ್ರಬುದ್ಧ ಶಾಲಾಶಿಕ್ಷಕರಿದ್ದರು, ಈಗ ಅವೆಲ್ಲ ಮಾಯವಾಗುತ್ತ ಬಂದಿವೆ. ಕಾಲ ವೈಚಿತ್ರ್ಯವೆಂದು ಕೈಕಟ್ಟಿ ಕುಳಿತುಕೊಳ್ಳುವುದು ಸಲ್ಲ. ಚಂಪೂ ಸಾಹಿತ್ಯ ಗಮಕಕ್ಕೆ ಗಮಕಿಗಳು ವಿಶೇಷ ಶಕ್ತಿ ಸಂಪನ್ನರಾಗದಿದ್ದರೆ ಸಾಧ್ಯವಿಲ್ಲ. ಕಾರಣ, ನಮ್ಮ ಚಂಪೂ ಸಾಹಿತ್ಯ ಸುರಗಂಗೆ ಹರಿದ್ವಾರದವರೆಗೆ ಅಬ್ಬರಿಸುತ್ತ ಬರುವ ಬಿದ್ದೆದ್ದು ಪುಟಿದು ಜಿಗಿಜಿಗಿದು ಬರುವ ಆರ್ಭಟದವಳೂ ಹೌದು. ಹರಿದ್ವಾರದಿಂದ ಮುಂದೆ ಪ್ರಶಾಂತ ಗಂಭೀರವಾಗಿ ವಿಶಾಲವಾಗಿ ಹರಿದು ಬರುವವಳೂ ಹೌದು. ಪಂಪ ರನ್ನ ಜನ್ನ ರುದ್ರಭಟ್ಟಹರಿಹರ ಷಡಕ್ಷರಾದಿಗಳು ಮುಂದ ಜೀರಕರಸದ ಜಠರದಲ್ಲಿ ಕರಗುವವರಲ್ಲ. ಜಠರದಲ್ಲಿ ಪ್ರಬುದ್ಧ ಜೀವಕರಸ ಬೆಳೆಸಿಕೊಂಡವರ ಬಾಯಿಂದ ಹೋಗಬಂದಾರು, ಜಠರದಲ್ಲಿ ಜೀರ್ಣವಾದಾರು. ಇವರನ್ನು ಓದುವವರಿಲ್ಲದಿದ್ದರೆ ಓದಿಸುವವರಿಲ್ಲದಿದ್ದರೆ, ಕೇಳುವವರಿಲ್ಲದಿದ್ದರೆ ನಾವು ಪ್ರಬುದ್ಧಚೇತನರೆನ್ನಿಸಿಕೊಳ್ಳಲು ಶಕ್ಯವೇ. ಇದೇಸ್ಥಿತಿ ಇನ್ನೆರಡು ಮೂರು ತಲೆಮಾರು ಕಳೆದರೆ ಅಂಥ ಪ್ರಬುದ್ಧ ಸಾಹಿತ್ಯದ ಚಂಪೂ ಕೃತಿಗಳೆಲ್ಲ ಗಾಜಿನ ಬೀರುಗಳಲ್ಲಿ ಸ್ವಸ್ಥವಾಗಿ ಕಣ್ಮುಚ್ಚಿ ಕುಳಿತು-ಕೊಳ್ಳುತ್ತವೆ- ಇಲ್ಲವೆ ಗೆದ್ದಿಲಾಹಾರವಾಗುತ್ತವೆ. ಹೊಳೆ ಹಳ್ಳ ಬೀಳುತ್ತವೆ.

ಅಥವಾ ಬೀದಿ ಅಂಗಡಿಯವರ ಸರಕು ಕಟ್ಟುವ ಸಾಮಗ್ರಿಗಳಾಗುತ್ತವೆ. ನಮ್ಮ ಸಾಹಿತ್ಯ ಸಂಸ್ಕೃತಿ ಇತಿಹಾಸಗಳನ್ನರಿಯದ ನಾವು ಕನ್ನಡಿಗರೆಂದು ಹೆಮ್ಮೆಯಿಂದ ಹೇಳಿಕೊಳ್ಳುವುದರಲ್ಲಿ ಅರ್ಥವಿದೆಯೆಂದೆನಿಸುವುದಿಲ್ಲ.

ಇಂದು ಕರ್ನಾಟಕದಲ್ಲಿ ಜಗತ್ತಿನಲ್ಲೆಲ್ಲ ಬೀಸುತ್ತಿರುವಂತೆಯೇ ಭಾವ –ನವ್ಯ –ನವ್ಯದಲ್ಲಿ ನವ್ಯ, ಬಂಡಾಯ –ದಲಿತ ಸಾಹಿತ್ಯದ ಗಾಳಿ ಬೀಸುತ್ತಿದೆ. ಅದು ಬೀಸುವುದರಲ್ಲಿ ತಪ್ಪಿಲ್ಲ. ಅದು ಶೈತ್ಯ ಸೌರಭ್ಯ ಮಾಂದ್ಯಗೊಂಡು ಸುಳಿಸುಳಿದು ಬರಲಿ. ಪ್ರಾಚೀನಾಚಾರ್ಯರ ಶ್ರೇಷ್ಠತೆಯ ಧ್ಯೇಯ ಧೋರಣೆಗಳನ್ನು ಮೈಗೂಡಿಸಿಕೊಂಡು ಬೀಸಲಿ. ಹಳೆಯದರಲ್ಲಿನ ಒಳ್ಳೆಯದನ್ನು ಸ್ವೀಕರಿಸಿ– ಗಂಭೀರವಾಗಿ ಬೀಸಲಿ. ಇದೇ ಶ್ರೇಷ್ಠ ಸಾಹಿತ್ಯವೆಂಬ ಹಮ್ಮು ಬಿಮ್ಮು ಬಿಗುಮಾನಗಳಿದು ಕವಿಪದ ಪಟ್ಟವಣೆಯತ್ತಣಿಂದ ಪ್ರಾಣವಾಯುವಾಗಿ ಹರಿದು ಬರಲಿ. ಚಂಪೂಸಾಹಿತ್ಯರಾಶಿ ಅವಜ್ಞೆಗೊಳಗಾಗುವುದು ಮಾತ್ರ ಸಲ್ಲದು. ಅಲ್ಲಿ ನಮ್ಮವರ ಪ್ರಬುದ್ಧ ಭಾವ ಸಂಪತ್ತಿದೆ. ಅವರ ಕಲ್ಪನಾ ವಿಲಾಸ ವೈಭವವಿದೆ. ಭಾಷಾಸರಸ್ವತಿಯ ಸೌಂದರ್ಯರಾಶಿಯಿದೆ. ಶಾಸ್ತ್ರಜ್ಞಾನದ ಅಗಾಧ ಭಂಡಾರವಿದೆ. ದರ್ಶನದ ಭಾಷ್ಯವಿದೆ.

ಇಂಥ ಚಂಪೂಸಾಹಿತ್ಯರಾಶಿಯ ಸಂಪತ್ತನ್ನು ಕನ್ನಡಿಗರ ಮನೆಮನೆಗೆ, ಮನಮನಕ್ಕೆ ತಲುಪಿಸುವತ್ತ ಕೈಕೊಳ್ಳಬೇಕಾದ ಯೋಜನೆಗಳ ಬಗೆಗೆ ನಮ್ಮ ಐದಾರು ವಿಶ್ವವಿದ್ಯಾಲಯಗಳು ಒಟ್ಟುಗೂಡಿ ಯೋಚಿಸಬೇಕು. ಕನ್ನಡ ಸಾಹಿತ್ಯ ಪರಿಷತ್ತು ಬದ್ಧಕಂಕಣವಾಗಬೇಕು. ಮಠಮಾನ್ಯಗಳು ಕಣ್ತೆರೆಯಬೇಕು. ಸಾರ್ವಜನಿಕ ಮುಂದಾಳುಗಳು ನಿದ್ರೆಯಿಂದ ಎಚ್ಚರಗೊಳ್ಳಬೇಕು. ರಾಜಕೀಯ ಮುಂದಾಳುಗಳು ಅಪ್ರಬುದ್ಧ ರಾಜಕೀಯದ ತೆರೆಮರೆ ಸರಿಸಿ ಸಮಗ್ರ ಸಮ್ಯಕ್ ದೃಷ್ಟಿ ಬೀರಬೇಕು. ಕರ್ನಾಟಕದ ಮಟ್ಟಿಗಾದರೂ ಕನ್ನಡವನ್ನು ಸಾರ್ವಭೌಮ ಪದ ಪಟ್ಟದಲ್ಲಿ ಕುಳ್ಳಿರಿಸಬೇಕು. ಕರ್ನಾಟಕ ಸಾಹಿತ್ಯರಾಶಿಯಲ್ಲಿ ಸಾರ್ವಭೌಮ ಪದವಿಯನ್ನಲಂಕರಿಸಿರುವ ಚಂಪೂಸಾಹಿತ್ಯರಾಶಿಯ ಆಳ-ನೀಳ, ನೆಲೆ-ಬೆಲೆ, ಕಂಪು-ಇಂಪು, ಸೊಂಪು-ಪೆಂಪುಗಳು ಕನ್ನಡಿಗರೆಲ್ಲರಲ್ಲೂ ಮನೋಮಂದಿರದಲ್ಲಿ ಸದ್ಭಾವನೆ ಬೀರಬೇಕು. ಸುಮಾರು ಸಾವಿರಾರು ವರ್ಷಗಳಿಂದ ಹರಿದುಬಂದ ಕನ್ನಡ ಸಾಹಿತ್ಯರಾಶಿಯಲ್ಲಿ ಚಂಪೂಸಾಹಿತ್ಯವನ್ನು ಹೊರತುಪಡಿಸಿದರೆ, ಉಳಿದ ಸಾಹಿತ್ಯರಾಶಿಗೆ ಅಷ್ಟೊಂದು ಘನತೆ ಗಂಭೀರತೆಗಳುಂಟಾದಾವೆಂದು ನನಗನಿಸುವುದಿಲ್ಲ. ಇಂಥ ಅಮೋಘ ಸಾಹಿತ್ಯರಾಶಿಯ ಜ್ಞಾನದ ಹರಿಕಾರರಾದ ಗಮಕಿಗಳನ್ನು ಅಧಿಕ ಸಂಖ್ಯೆಯಲ್ಲಿ ಬೆಳೆಸುವ–ಬೆಳೆದವರನ್ನು ಬಳಸಿಕೊಳ್ಳುವ ಕಾರ್ಯವನ್ನು ವಿಶ್ವವಿದ್ಯಾಲಯ–ಸಾಹಿತ್ಯ ಪರಿಷತ್, ಸರಕಾರ-ಮಠಮಂದಿರ ಸಾರ್ವಜನಿಕ ಗಣ್ಯ ಸಂಘ ಸಂಸ್ಥೆಗಳು ವ್ಯಾಪಕವಾಗಿ ಅಧಿಕೋತ್ಸಾಹದಿಂದ ಕಾರ್ಯತತ್ಪರವಾಗಬೇಕಾಗಿದೆ. ಈಗ ಗಮಕ ಶಿಕ್ಷಣ ಕೊಡುವ ತರಗತಿಗಳು ಅಲ್ಲಲ್ಲಿ ನಡೆಯುತ್ತಿವೆ. ಆ ಕಾರ್ಯ ಇನ್ನೂ ವ್ಯವಸ್ಥಿತವಾಗಿ ಪರಿಣಾಮಕಾರಿಯಾಗಿ ಫಲಕಾರಿಯಾಗಿ ನಡೆಯಬೇಕೆಂಬುದೇ ತಾತ್ಪರ್ಯ.

●



# ಪುರಾಣ ಮುನಿಗಳು–5

## ದುರ್ವಾಸ

—ಪ. ರಾಮಕೃಷ್ಣಶಾಸ್ತ್ರಿ

ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದಲ್ಲಿ ಅತ್ರಿ ಮಹರ್ಷಿಯಿಂದ ಅನಸೂಯೆಯಲ್ಲಿ ಕ್ರಮವಾಗಿ ಚಂದ್ರ, ದುರ್ವಾಸಸ್, ದತ್ತಾತ್ರೇಯ, ಆರ್ಯಮ ಎಂಬ ನಾಲ್ವರು ಪುತ್ರರು ಜನಿಸಿದರು. ದುರ್ವಾಸನು ಕಾಲಾಗ್ನಿ ರುದ್ರ (ಶಂಕರ)ನ ಅಂಶದಿಂದ ಜನಿಸಿದುದರಿಂದ ಅತ್ಯಂತ ಕ್ರೋಧಾಗ್ನಿಯುಳ್ಳವನು, ಮುಂಗೋಪಿ ಎಂದು ಪ್ರಸಿದ್ಧನಾದನು. ಆದರೆ ಆತ ಮಹಾ ವೈರಾಗ್ಯಶಾಲಿ; ಉಗ್ರ ತಪಸ್ವಿ. ಲಲಿತಾ ಪರಮೇಶ್ವರಿಯ ಅನನ್ಯ ಭಕ್ತನಾದ ಅವನು ರಚಿಸಿದ ಲಲಿತಾ ಸ್ತವರತ್ನ ಅಥವಾ ಆರ್ಯಾದ್ವಿಶತಿ ಎಂಬ ಹೆಸರಿನ ಇನ್ನೂರು ಶ್ಲೋಕಗಳು ಭಕ್ತಿಪೂರಿತವಾಗಿ ಪಠನಯೋಗ್ಯವಾಗಿವೆ.

ಒಂದು ಸಲ ದುರ್ವಾಸ ಸಂಚರಿಸುತ್ತಾ ದೇವಲೋಕಕ್ಕೆ ಹೋಗಿದ್ದಾಗ ವಿದ್ಯಾಧರಿಯೊಬ್ಬಳ ಕೈಯಲ್ಲಿದ್ದ ಕಲ್ಪವೃಕ್ಷದ ಹೂಗಳ ಮಾಲೆಯನ್ನು ನೋಡಿದ. ಅದರ ಕಂಪಿಗೆ ಪರವಶನಾಗಿ ಅವಳಲ್ಲಿ ಕೇಳಿ ಆ ಮಾಲೆಯನ್ನು ತೆಗೆದುಕೊಂಡ. ಉನ್ಮತ್ತನಂತೆ ಅದನ್ನು ತನ್ನ ತಲೆಗೆ ಸುತ್ತಿಕೊಂಡು ಬರುತ್ತಿದ್ದಾಗ ಇಂದ್ರನು ಐರಾವತದ ಮೇಲೇರಿಕೊಂಡು ಅವನಿಗೆದುರಾದ. ಶಚಿಯೊಡಿಂಗೆ ಕುಳಿತ್ತಿರುವ ಇಂದ್ರನೇ ಈ ಮಾಲೆಯನ್ನು ಧರಿಸಲು ಯೋಗ್ಯನೆಂದು ದುರ್ವಾಸ ಅವನ ಮೈ ಮೇಲೆ ಅದನ್ನೆಸೆದರೆ ಮಧಾಂದನಾದ ಇಂದ್ರ ಅದನ್ನು ಅಸಡ್ಡೆಯಿಂದ ಐರಾವತದ ಕುಂಭಸ್ಥಳದ ಮೇಲೆ, ಒಗೆದ. ದುರ್ವಾಸ ಕುಪಿತನಾಗಿ "ಇಂದ್ರನೇ, ನಿನ್ನ ಸಕಲ ಸಂಪತ್ತೂ ಸಮುದ್ರವಶವಾಗಲಿ" ಎಂದು ಶಪಿಸಿ, "ಸಮುದ್ರ ಮಥನ"ಕ್ಕೆ ಕಾರಣನಾದ.

ಒಮ್ಮೆ ದುರ್ವಾಸ ಕಣ್ವರ ಆಶ್ರಮಕ್ಕೆ ಹೋಗಿದ್ದ. ದುಷ್ಯಂತನೊಂದಿಗೆ ಗಾಂಧರ್ವ ವಿವಾಹ ಮಾಡಿಕೊಂಡಿದ್ದ ಶಕುಂತಲೆ ಅವನ ನೆನಪಿನಲ್ಲಿ ಲೀನಳಾಗಿ ತನ್ನನ್ನೇ ಮರೆತಿದ್ದುದರಿಂದ ಋಷಿ ಬಂದುದನ್ನೇ ಗಮನಿಸಲಿಲ್ಲ, ಆಗ ದುರ್ವಾಸ ಕೋಪದಿಂದ "ದುಷ್ಯಂತ ನಿನ್ನನ್ನು ಮರೆತುಬಿಡಲಿ" ಎಂಹು ಶಪಿಸಿದ. ಶಂಕುತಳೆಯು

ಸಖಿಯರು ಅವನ ಕಾಲುಗಳಲ್ಲಿ ಹೊರಳಾಡಿ, "ಮುನೀಂದ್ರಾ, ಮುಗ್ಧ ಬಾಲೆ ಎಸಗಿರುವ ತಪ್ಪನ್ನು ಮನ್ನಿಸು. ಪತಿವಿರಹದಿಂದಾಗಿ ನಿಮ್ಮ ಆಗಮನ ಆಕೆಗೆ ಗೋಚರಿಸಲಿಲ್ಲ" ಎಂದು ಬಹು ವಿಧದಿಂದ ಕೇಳಿಕೊಂಡರು. ದುರ್ವಾಸ ಶಾಂತನಾಗಿ, "ದುಷ್ಯಂತನು ನೀಡಿದ ಆಭರಣವೊಂದು ಅವನ ಕೈ ಸೇರಿದಾಗ ಮತ್ತೆ ಅವನು ಅವಳನ್ನು ಕರೆಸಿಕೊಳ್ಳುತ್ತಾನೆ" ಎಂದು ಪ್ರತಿಶಾಪವನ್ನು ಹೇಳಿದ.

ಸಖಿಯರೊಂದಿಗೆ ಶಕುಂತಳೆ ಪತಿಗೃಹಕ್ಕೆ ತೆರಳುವ ದಾರಿಯಲ್ಲಿ ಶಚಿತೀರ್ಥ ದಲ್ಲಿ ಸ್ನಾನಕ್ಕಿಳಿದಳು. ಆಗ ದುಷ್ಯಂತ ಅವಳಿಗೆ ಕೊಟ್ಟಿದ್ದ ಗುರುತಿನ ಉಂಗುರ ಆಕಸ್ಮಾತ್ ನೀರಿಗೆ ಬಿದ್ದಿತು. ಅದನ್ನು ಒಂದು ಮೀನು ನುಂಗಿತು. ಮುನಿ ಶಾಪದಿಂದಾಗಿ ದುಷ್ಯಂತ ಅವಳನ್ನು ಮರೆತು ಬಿಟ್ಟಿದ್ದ. ಆದರೆ ಆ ಮೀನನ್ನು ಬೆಸ್ತರು ಹಿಡಿದು ಸೀಳಿದಾಗ ಅದರ ಹೊಟ್ಟೆಯಲ್ಲಿ ಉಂಗುರ ಸಿಕ್ಕಿತು. ಅದನ್ನು ರಾಜನಿಗೊಪ್ಪಿಸಿದರು. ಉಂಗುರವನ್ನು ಕಾಣುತ್ತಲೇ ದುಷ್ಯಂತನಿಗೆ ಸತಿಯ ನೆನ ಪಾಯಿತು. ಮಾರೀಚ ಋಷಿಯ ಆಶ್ರಮದಲ್ಲಿದ್ದ ಅವಳನ್ನು ಮರಳಿ ಕರೆಸಿ ಕೊಂಡ.

ರಾಮಾವತಾರವನ್ನು ನಿಲ್ಲಿಸುವ ಸೂಚನೆ ನೀಡಲು ಕಾಲಪುರುಷ ರಾಮನ ಬಳಿಗೆ ಬಂದು, ಏಕಾಂತಗೃಹದಲ್ಲಿ ಸಂಧಿಸಿದ. ತಮ್ಮ ಮಾತುಕತೆ ನಡೆಯುವ ಹೊತ್ತಿ ನಲ್ಲಿ ಯಾರೂ ಯಾವ ಕಾರಣಕ್ಕೂ ಒಳಗೆ ಬರಬಾರದೆಂದು ರಾಮನು ಲಕ್ಷ್ಮಣ ನನ್ನು ಬಾಗಿಲಿನಲ್ಲಿ ಕಾವಲು ನಿಲ್ಲಿಸಿದ.

ಅದೇ ವೇಳೆಗೆ ರಾಮನನ್ನು ಕಾಣಲು ದುರ್ವಾಸ ಬಂದ. ತನ್ನನ್ನು ಒಳಗೆ ಬಿಡದಿದ್ದರೆ ಅಯೋಧ್ಯೆಯ ಪ್ರಜೆಗಳೊಂದಿಗೆ ರಾಮನೂ ಸುಟ್ಟು ಹೋಗುವಂಥ ಶಾಪ ನೀಡುವುದಾಗಿ ಹೆದರಿಸಿದ. ಲಕ್ಷ್ಮಣನು ಶಾಪಕ್ಕೆ ಹೆದರಿ ಅಣ್ಣನ ಆಜ್ಞೆಯನ್ನು ಉಲ್ಲಂಘಿಸಿ ಮುನಿಯನ್ನು ಒಳಗೆ ಬಿಟ್ಟ. ಅದರಿಂದಾಗಿ ಲಕ್ಷ್ಮಣನಿಗೆ ರಾಮನು ದೇಶ ವನ್ನೇ ತೊರೆದು ಹೋಗಬೇಕೆಂಬ ಶಿಕ್ಷೆ ವಿಧಿಸಿದ.

ದುರ್ವಾಸ ಅದೇ ತಾನೇ ಸಾವಿರ ವರ್ಷಗಳ ಸುದೀರ್ಘ ತಪಸ್ಸು ಮುಗಿಸಿ, ಸುಗ್ರಾಸ ಭೋಜನವನ್ನು ಉಣ್ಣಬೇಕೆಂಬ ಆಸೆಯಿಂದ ರಾಮನ ಬಳಿಗೆ ಬಂದಿದ್ದ. ರಾಮನು ಅವನ ಅಭೀಷ್ಟೆಯನ್ನು ಪೂರಯಿಸಿ ಕಳುಹಿಸಿಕೊಟ್ಟ.

ದ್ವಾಪರಾಯುಗದಲ್ಲಿ ದುರ್ವಾಸ ಕುಂತಿಭೋಜನ ಅರಮನೆಗೆ ಹೋದಾಗ ಕುಂತಿಭೋಜನು ತನ್ನ ಮಗಳಾದ ಪೃಥೆಯನ್ನು ಅವನ ಸೇವೆಗೆ ನಿಯುಕ್ತಗೊಳಿಸಿದ. ಅವಳ ಸೇವಾ ಕೈಂಕರ್ಯದಿಂದ ಸಂತುಷ್ಟನಾದ ಮುನಿ, ಮುಂದೆ ಕುಂತಿ ಪಾಂಡು



ರಾಜನ ಹೆಂಡತಿಯಾದರೂ ಅವಳಿಗೆ ದಾಂಪತ್ಯ ಸುಖ ಸಿಗದೆ ಮಕ್ಕಳನ್ನು ಪಡೆಯ ಲಾರಳೆಂದು ಅರಿತುಕೊಂಡ. ಆದ್ದರಿಂದ ಅವಳು ಬಯಸಿದಾಗ ಯಾವ ದೇವತೆ ಯಾದರೂ ಆಗಮಿಸಿ ಸಂತಾನವನ್ನು ಕರುಣಿಸುವಂಥ ದಿವ್ಯಮಂತ್ರವನ್ನು ಉಪದೇಶಿಸಿ ಅದರ ಮಹತ್ವವನ್ನು ತಿಳಿಸಿ ಹೊರಟುಹೋದ.

ಪಾಂಡವರು ವನವಾಸದಲ್ಲಿದ್ದಾಗ ಸೂರ್ಯದೇವ ಅವರಿಗೆ ಒಂದು ಅಕ್ಷಯ ಪಾತ್ರೆಯನ್ನು ಕರುಣಿಸಿದ್ದ. ಅದರಲ್ಲಿ ಏನಾದರೊಂದು ಚೂರು ಗೆಡ್ಡೆ ಗೆಣಸನ್ನಾರಿಸಿ ಧರ್ಮರಾಜ ಪ್ರಾರ್ಥಿಸಿಕೊಂಡರೆ ಬೇಕಾದ ಆಹಾರಗಳೆಲ್ಲವೂ ಸಿದ್ಧಗೊಳ್ಳುತ್ತಿದ್ದುವು. ಎಷ್ಟು ಮಂದಿ ಅತಿಥಿಗಳಿದ್ದರೂ ಎಲ್ಲರಿಗೂ ಬೇಕಾಗುವಷ್ಟು ಆಹಾರ ಸಿಗುತ್ತಿತ್ತು. ದ್ರೌಪದಿ ಭುಂಜಿಸಿದ ಮೇಲೆ ಪಾತ್ರೆ ಖಾಲಿಯಾಗುತ್ತಿತ್ತು. ಮತ್ತೆ ಆ ದಿನ ಪಾತ್ರೆ ಯಲ್ಲಿ ಆಹಾರ ಸಿಗುತ್ತಿರಲಿಲ್ಲ.

ಈ ರಹಸ್ಯ ದುರ್ಯೋಧನನಿಗೆ ತಿಳಿಯಿತು. ಒಂದು ಸಲ ತನ್ನ ಅರಮನೆಗೆ ದುರ್ವಾಸನು ಬಂದಾಗ ಅವನನ್ನು ಸತ್ಕರಿಸಿ ಸಂತುಷ್ಟಗೊಳಿಸಿದ. ಬೇಕಾದ ವರವನ್ನು ಕೋರಿಕೊಳ್ಳುವಂತೆ ದುರ್ವಾಸ ಹೇಳಿದಾಗ, ಪಾಂಡವರ ಊಟ ಮುಗಿದ ಮೇಲೆ ನೀವು ನಿಮ್ಮ ಎಲ್ಲಾ ಶಿಷ್ಯರೊಂದಿಗೆ ಅವರ ಬಳಿಗೆ ತೆರಳಿ ಭೋಜನವನ್ನು ಕೇಳಬೇಕು" ಎಂದ ದುರ್ಯೋಧನ.

ಅದೇ ರೀತಿ ಸಾವಿರಾರು ಮಂದಿ ಶಿಷ್ಯರೊಂದಿಗೆ ದುರ್ವಾಸ ಆಗಮಿಸಿ ಭೋಜನ ಬೇಡಿದಾಗ ಧರ್ಮರಾಜನಿಗೆ ದಿಕ್ಕು ತೋಚಲಿಲ್ಲ. ಅಕ್ಷಯ ಪಾತ್ರೆಯಲ್ಲಿ ಅಂದು ಆಹಾರ ಸಿಗುವಂತಿಲ್ಲ. ಭೋಜನ ನೀಡದಿದ್ದರೆ ದುರ್ವಾಸ ಶಪಿಸದೆ ಬಿಡಲಾರ. ಆದರೂ ಆತ ಕೃಷ್ಣನನ್ನೇ ಸ್ಮರಿಸುತ್ತಾ "ಮುನಿಗಳೇ ಸ್ನಾನ ಅನುಷ್ಠಾನಗಳನ್ನು ತೀರಿಸಿ ಬನ್ನಿ." ಎಂದು ಕಳುಹಿಸಿದ

ಆಗ ಕೃಷ್ಣನು "ಹಸಿವೋ ಹಸಿವು, ದ್ರೌಪದಿ, ಏನಾದರೂ ತಿನ್ನಲು ಕೊಡು" ಎಂದು ಕೂಗುತ್ತ ಬಂದ. "ನನ್ನ ಊಟ ಮುಗಿದ ಮೇಲೆ ಅಕ್ಷಯಪಾತ್ರೆಯಲ್ಲಿ ಏನೂ ಉಳಿಯುವುದಿಲ್ಲವಲ್ಲ" ಎಂದಳು ದ್ರೌಪದಿ. ಆದರೂ ಏನಾದರೂ ಇದ್ದರೆ ಸಾಕು ಎಂದು ಕೃಷ್ಣ ಪಾತ್ರೆಯ ತಳದಲ್ಲಿದ್ದ ಒಂದು ಅಗುಳನ್ನು ತೆಗೆದು ತಿಂದುಬಿಟ್ಟ. ಆ ಕೂಡಲೇ ಸ್ನಾನ ಮಾಡುತ್ತಿದ್ದ ದುರ್ವಾಸನಿಗೂ ಶಿಷ್ಯರಿಗೂ ಔತಣದೂಟ ಉಂಡಷ್ಟೇ ತೃಪ್ತಿಯಿಂದ ಹೊಟ್ಟೆ ತುಂಬಿ ತೇಗು ಬರಲಾರಂಭಿಸಿತು. ಆತ ಪಾಂಡವರ ಬಳಿಗೆ ಬಾರದೆ ಅಲ್ಲಿಂದಲೇ ಹಿಂತೆರಳಿದ.

ಅಂಬರೀಷ ಪ್ರಸಿದ್ಧ ವಿಷ್ಣುಭಕ್ತ. ಅವನ ಭಕ್ತಿಗೆ ಮೆಚ್ಚಿದ ಹರಿ ಅವನಿಗೆ ತನ್ನ ಚಕ್ರಾಯುಧವನ್ನು ಕೊಟ್ಟಿದ್ದ. ಅಂಬರೀಷ ಪ್ರತಿಸಲವೂ ಏಕಾದಶಿ ಉಪವಾಸ ವ್ರತಾ

ಚರಣೆ ಮಾಡಿ ದಾನ ಧರ್ಮಾದಿಗಳನ್ನು ನೀಡುತ್ತಿದ್ದ. ದ್ವಾದಶಿಯ ದಿನ ಬೆಳಿಗ್ಗೆ ಪಾರಣೆ ಮಾಡಿ ಆಹಾರ ಸ್ವೀಕರಿಸುವುದು ಅವನ ರೂಢಿ. ಅದರಿಂದ ಆತ ಹರಿಗೆ ಅತಿ ಹತ್ತಿರದವನಾಗಿದ್ದ.

ಒಮ್ಮೆ ಅಂಬರೀಷ ಅತಿಥಿಗಳೊಂದಿಗೆ ಪಾರಣೆಗೆ ಸಿದ್ಧನಾಗುತ್ತಿದ್ದಾಗ ದುರ್ವಾಸ ಆಗಮಿಸಿದ. ಅಂಬರೀಷ ಅವನೊಂದಿಗೆ ಪಾರಣೆ ಸ್ವೀಕರಿಸಬೇಕೆಂದು ಪ್ರಾರ್ಥಿಸಿದ. ದುರ್ವಾಸ ಅದಕ್ಕೊಪ್ಪಿ ಸ್ನಾನಕ್ಕಾಗಿ ನದಿಗೆ ತೆರಳಿದ. ಅಲ್ಲಿ ಬ್ರಹ್ಮಧ್ಯಾನದಲ್ಲಿ ಮೈ ಮರೆತುಬಿಟ್ಟ.

ಇತ್ತ ಮುನಿಯನ್ನು ಅಂಬರೀಷ ಬಹುಹೊತ್ತು ಕಾದ. ಇನ್ನು ಅರ್ಧ ಘಳಿಗೆ ಕಳೆದರೆ ದ್ವಾದಶಿಯ ಫಲ ನಷ್ಟವಾಗುತ್ತದೆ. . ಆದರೆ ಮುನಿಯನ್ನು ಬಿಟ್ಟು ಪಾರಣೆ ಮಾಡುವಂತಿಲ್ಲ. ಆಗ ಅವನ ಪುರೋಹಿತನು, "ನೀನು ಸ್ವಲ್ಪ ನೀರು ಕುಡಿದು ತುಳಸಿದಳ ಸ್ವೀಕರಿಸಿದರೆ ಪಾರಣೆಯ ಫಲವೂ ಸಿಗುತ್ತದೆ. ಅತಿಥಿಗಳನ್ನು ಅಲಕ್ಷಿಸಿದಂತೆಯೂ ಆಗುವುದಿಲ್ಲ" ಎಂದು ಹೇಳಿದ.

ಅಂಬರೀಷ ಹಾಗೆಯೇ ಮಾಡಿದ. ಆದರೆ ಆ ಹೊತ್ತಿಗೇ ದುರ್ವಾಸ ಆಗಮಿಸಿ, ರಾಜನ ಕೃತ್ಯವನ್ನು ನೋಡಿ ಕ್ರೋಧೋನ್ಮತ್ತನಾದನು. ಅಂಬರೀಷನು ಬಹು ವಿಧದಿಂದ ಕೇಳಿಕೊಂಡರೂ ಅವನನ್ನು ಕ್ಷಮಿಸದೆ ತನ್ನ ಜಟೆಯನ್ನು ನೆಲಕ್ಕೆ ಬಡಿದ. ಅದರಿಂದ ಭೀಕರಾಕೃತಿಯ ಒಂದು ಭೂತ ಉತ್ಪನ್ನವಾಗಿ ಅಂಬರೀಷನನ್ನು ಕೊಲ್ಲಲು ಬೆಂಬತ್ತಿತು.

ಅಂಬರೀಷ ಆರ್ತನಾಗಿ ಮೊರೆಯಿಟ್ಟ. ಆಗ ಸುದರ್ಶನ ಚಕ್ರವು ಭೂತವನ್ನು ಸಂಹರಿಸಿ, ದುರ್ವಾಸನನ್ನೇ ಕತ್ತರಿಸುವೆನೆಂದು ಅವನ ಬಳಿಗೆ ಧಾವಿಸಿತು. ಭೀತನಾದ ಮುನಿ ಮೂರು ಲೋಕಗಳಿಗೆ ಓಡಿದರೂ ಚಕ್ರ ಅವನ ಬೆನ್ನು ಬಿಡಲಿಲ್ಲ ಅವನು ತನ್ನನ್ನು ರಕ್ಷಿಸಲು ದೇವತೆಗಳಲ್ಲಿ ಬೇಡಿಕೊಂಡ. "ನಮ್ಮಿಂದಾಗದು ವಿಷ್ಣುವಿನ ಮೊರೆ ಹೋಗು" ಎಂದರು ದೇವತೆಗಳು. ಬ್ರಹ್ಮನೂ ಶಿವನೂ ಅವನಿಗೆ ಇದೇ ರೀತಿ ಹೇಳಿದರು.

ದುರ್ವಾಸ ವಿಷ್ಣುವಿನ ಮೊರೆ ಹೊಕ್ಕಾಗ ವಿಷ್ಣುವು, "ಚಕ್ರವು ನಿನ್ನ ಬೆಂಬತ್ತಿರುವುದು ಅಂಬರೀಷನ ಆಜ್ಞೆಯ ಪ್ರಕಾರ. ಅವನಿಗೆ ಶರಣು ಹೊಕ್ಕರೆ ಮಾತ್ರ ಸಾವಿನಿಂದ ಪಾರಾಗಬಲ್ಲೆ" ಎಂದು ಹೇಳಿದ. ವಿಧಿಯಿಲ್ಲದೆ ದುರ್ವಾಸ ಅಂಬರೀಷನ ಮೊರೆ ಹೊಕ್ಕು "ಚಕ್ರವನ್ನು ಹಿಂತೆಗೆದುಕೋ ನನ್ನನ್ನು ಕಾಪಾಡು" ಎಂದು ಬೇಡಿಕೊಂಡ.

ಅಂಬರೀಷ ಚಕ್ರವನ್ನು ಹಿಂತೆಗೆದುಕೊಂಡು, "ಮುನೀಂದ್ರಾ, ಈ ಚಕ್ರ ನಿಮ್ಮ



ಬೆಂಬತ್ತಿ ಒಂದು ವರುಷವಾಯಿತು. ಈ ಅವಧಿಯಲ್ಲಿ ನನಗೆ ನೀರು ಮಾತ್ರ ಆಹಾರ. ನಿಮ್ಮೊಂದಿಗೆ ಪಾರಣೆ ಮಾಡದೆ ಬೇರೆ ಆಹಾರ ಭುಂಜಿಸುವಂತಿಲ್ಲ" ಎಂದನು.

ದುರ್ವಾಸ ಅವನೊಂದಿಗೆ ಪಾರಣೆ ಸ್ವೀಕರಿಸಿ, ತನ್ನ ಪುಣ್ಯಬಲವನ್ನೆಲ್ಲ ಅವನಿಗೆ ಧಾರೆಯೆರೆದ. ಆದರೆ ಸುದರ್ಶನ ಚಕ್ರಕ್ಕೆ ಮೂರೂ ಮುಕ್ಕಾಲು ಘಳಿಗೆಯ ಕಾಲ ಸ್ಥಗಿತವಾಗಿರಲಿ ಎಂದು ಶಪಿಸಿದ. ಜಯದ್ರಥನ ವಧೆಯ ಕಾಲಕ್ಕೆ ಆ ಶಾಪ ದಿಟವಾಯಿತು.

ಕೃಷ್ಣನನ್ನು ಪರೀಕ್ಷಿಸಲೆಂದು ದುರ್ವಾಸ ದ್ವಾರಕೆಗೂ ಹೋಗಿದ್ದ. ಭೋಜನ ಮಾಡುವಾಗ ಕೃಷ್ಣನ ತಾಳ್ಮೆಯನ್ನು ಒರೆಗೆ ಹಚ್ಚಲು ಪಾಯಸವನ್ನು ರುಕ್ಮಿಣಿ ಮತ್ತು ಕೃಷ್ಣನ ಮೈಗೆಲ್ಲಾ ಚೆಲ್ಲಿದ. ಮುನಿಯ ಸ್ವಭಾವ ಅರಿತಿದ್ದ ಕೃಷ್ಣನು ಕುಪಿತನಾಗದೆ ಮಹಾಪ್ರಸಾದ ಎನ್ನುತ್ತ ಆ ಪಾಯಸವನ್ನು ಮೈಮೇಲೆ ಬಳಿದುಕೊಂಡ. ಆದರೂ ಅಂಗಾಲಿಗೆ ಮಾತ್ರ ಹಚ್ಚಿಕೊಳ್ಳಲು ಮರೆತುದರಿಂದ ಅವನಿಗೆ ಅಂಗಾಲಿನ ಮೂಲಕ ಸಾವು ಬರಲೆಂದು ದುರ್ವಾಸ ಹೇಳಿದ. ದುರ್ವಾಸನ ಮಡದಿ, ಔರ್ವನ ಮಗಳು ಕಂಥಳಿ ಅವನಿಗಿಂತಲೂ ಮಹಾ ಕೋಪಿಷ್ಠೆ.

ಒಮ್ಮೆ ದುರ್ವಾಸ ಕಾಶಿಕ್ಷೇತ್ರಕ್ಕೆ ಬಂದು ಶಿವನನ್ನು ಕುರಿತು ತಪಸ್ಸು ಮಾಡಿದ. ಶಿವ ಮೈದೋರಲಿಲ್ಲ, ಮುನಿ ಕೋಪಗೊಂಡ. ಅವನ ಕೋಪದ ಬೆಂಕಿ ಇಡೀ ಆಕಾಶವನ್ನು ವ್ಯಾಪಿಸಿತು. ಆಗ ಶಿವ ಓಡುತ್ತಾ ಬಂದು, "ಅಯ್ಯೋ, ಕಾಶಿಕ್ಷೇತ್ರ ಮುಕ್ತಿದಾಯಕವಾದುದು. ಅದನ್ನು ಶಪಿಸಿ ಅದರ ಪಾವಿತ್ರ್ಯವನ್ನು ಕೆಡಿಸಬೇಡ. ಬೇಕಾದ ವರ ಕೋರಿಕೋ" ಎಂದ. ದುರ್ವಾಸ ತನ್ನ ತಿಳಿಗೇಡಿತನಕ್ಕೆ ನಾಚಿ, ಭಗವಂತನ ಕೃಪೆಯಿಂದ ಜ್ಞಾನಸಿದ್ಧಿಯನ್ನು ಪಡೆದ.

ಮುದ್ಗಲ ಎಂಬ ಋಷಿಯನ್ನು ಪರೀಕ್ಷಿಸಲು ದುರ್ವಾಸ ಆರು ಸಲ ಹೋದಾಗಲೂ ಮುದ್ಗಲ ಅವನನ್ನು ಸತ್ಕರಿಸಿ, ಸಂಪ್ರೀತಿಗೊಳಿಸಿದ. ಗದ್ದೆಗಳಲ್ಲಿ ಉದುರಿದ ಕಾಳನ್ನು ಹೆಕ್ಕಿ ತಂದು ಅದರಿಂದ ಅತಿಥಿಗಳನ್ನು ಸತ್ಕರಿಸುತ್ತಿದ್ದ ಮುದ್ಗಲನನ್ನು ಸ್ವರ್ಗಕ್ಕೆ ಕರೆದೊಯ್ಯಲು ದುರ್ವಾಸ ಆದೇಶಿಸಿದ. ದೇವತೆಗಳು ವಿಮಾನದೊಂದಿಗೆ ಮುದ್ಗಲನ ಬಳಿಗೆ ಬಂದು ಅಲ್ಲಿನ ಭೋಗಭಾಗ್ಯಗಳನ್ನು ಹಲವು ವಿಧವಾಗಿ ವರ್ಣಿಸಿ, "ಅಲ್ಲಿ ಯಾರೂ ದುಡಿಯಬೇಕಾಗಿಲ್ಲ. ಸುಖೋಪಭೋಗಗಳು ತಾನಾಗಿ ಸಿಗುತ್ತವೆ" ಎಂದರು. ಆದರೆ ಮುದ್ಗಲ, "ದುಡಿಯದೆ ಉಣ್ಣುವ ನಾಕ ನನಗೆ ಬೇಡ" ಎಂದು ಬಿಟ್ಟ. ಯಜ್ಞ ಮಾಡುವುದೇ ಹವ್ಯಾಸವಾಗಿದ್ದ ಶ್ವೇತಕಿ ರಾಜನಿಂದ ಯಜ್ಞಮಾಡಿಸಿ, ಯಜ್ಞೇಶ್ವರನಿಗೆ ಅಜೀರ್ಣವುಂಟಾಗಿ ಖಾಂಡವ ವನ ಸುಡಲು ದುರ್ವಾಸನೇ ಕಾರಣ.

ಹೀಗೆ ತನ್ನ ಸಿಟ್ಟಿನಿಂದ ಸಜ್ಜನರನ್ನು ಪೀಡಿಸಿ ಸತ್ವಪರೀಕ್ಷೆ ಮಾಡುತ್ತಿದ್ದ ದುರ್ವಾಸ ಕಷ್ಟ ಬಂದರೂ ಧೃತಿಗೆಡದೆ ಭಗವಂತನನ್ನು ನಂಬಿದರೆ ಶ್ರೇಯಸ್ಸು ಸಿಗುವುದೆಂಬ ತತ್ವದ ಪ್ರತಿಪಾದಕನಾದ. ●

# ಅಖಿಲ ಕರ್ನಾಟಕ ಲೇಖಕಿಯರ ತೃತೀಯ ಸಮ್ಮೇಳನ

ವರದಿ: "ಕವಿತಾ ಕೃಷ್ಣ"

ಜೂನ್ ೨ ಮತ್ತು ೩ ರಂದು ತುಮಕೂರಿನ ಜನತೆಗೆ ಆನಂದವೋ ಆನಂದ. ಎಲ್ಲೆಲ್ಲೂ ಸಡಗರ, ಉತ್ಸಾಹ ಕವಿದಿತ್ತು. ಮುಗಿಲು ಮುಟ್ಟುವ ಮಂಗಳವಾದ್ಯದೊಂದಿಗೆ, ಪೂರ್ಣಕುಂಬ ಸ್ವಾಗತವೂ ಇತ್ತು. ಮಹಿಳೆಯರ ನಯನ ಮನೋಹರ ಮೆರವಣಿಗೆ ಬೇರೆ. ಹೃನ್ಮನಗಳಿಗೆ ಸಾಹಿತ್ಯದ ರಸದೂಟ. ಚಿತ್ತಾಕರ್ಷಕವಾದ ಚಿತ್ರಕಲಾ ಪ್ರದರ್ಶನ. ರಿಯಾಯಿತಿ ದರದಲ್ಲಿ ಪುಸ್ತಕ ಮಾರಾಟ. ಜೊತೆಗೆ ಉತ್ತಮವಾದ ಸಾಂಸ್ಕೃತಿಕ ಪ್ರದರ್ಶನಗಳು. ಸುಜನ ಜನಪದ ಜಿಲ್ಲೆಯೆನಿಸಿದ ತುಮಕೂರು ತಂಪಿನ ಹವೆಯಿಂದ ಕೂಡಿ, ಕನ್ನಡ ಸಾಹಿತ್ಯ ಸರಸ್ವತಿಯ ಅಡಿದಾವರೆಗೆ 'ತುಂಬೆ ಹೂ' ಎರಚಿ ಗೌರವವನ್ನು ಸೂಚಿಸಿತು.

ಇದು ಕಾದಂಬರಿಯ ವರ್ಣನೆಯಲ್ಲ. ತುಮಕೂರಿನಲ್ಲಿ ಜರುಗಿದ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನದ ಒಂದು ನೋಟವಷ್ಟೆ!

ದಿ|| ೨ ರಂದು ಶನಿವಾರ ಬೆಳಿಗ್ಗೆ ಲೇಖಕಿಯರ ಮೆರವಣಿಗೆಯೊಂದಿಗೆ ಸಮ್ಮೇಳನ ಪ್ರಾರಂಭವಾಯಿತು. ಪುರಸಭಾ ಕಛೇರಿಯಿಂದ ಶ್ರೀಮತಿ ಸಾವಿತ್ರಮ್ಮನವರ ಕಲ್ಯಾಣ ಮಂದಿರದ ಲೋಕಾಂಬಿಕಾ ಮಂಟಪದವರೆವಿಗೂ ನಡೆದ ಮೆರವಣಿಗೆಯಲ್ಲಿ ರಾಜ್ಯದ ಹಾಗೂ ಪರ ರಾಜ್ಯಗಳ ಲೇಖಕಿಯರೂ, ಜಿಲ್ಲೆಯ ರಾಜಕಾರಣಿಗಳು, ಸಚಿವರುಗಳು ಪಾಲ್ಗೊಂಡಿದ್ದರು.

## "ಉದ್ಘಾಟನಾ ಸಮಾರಂಭ"

ಶ್ರೀ ಸಿದ್ಧಗಂಗಾ ಕ್ಷೇತ್ರದ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ದಿವ್ಯ ಸಮ್ಮುಖದಲ್ಲಿ, 'ಅಭಿನವ ವಾಗ್ದೇವಿ ಕಂತಿ' ವೇದಿಕೆಯಲ್ಲಿ ಶ್ರೀಮತಿ ಹೆಚ್. ಆರ್. ಸುನಂದ ಅವರ ಪ್ರಾರ್ಥನೆಯೊಂದಿಗೆ ಉದ್ಘಾಟನಾ ಸಮಾರಂಭವು ಪ್ರಾರಂಭವಾಯಿತು. ಕರ್ನಾಟಕ ಸರ್ಕಾರದ ಕೈಗಾರಿಕಾ ಸಚಿವರಾದ ಶ್ರೀ ಎಸ್. ಆರ್. ಬೊಮ್ಮಾಯಿ



ಅವರು ಉದ್ಘಾಟನಾ ಭಾಷಣ ಮಾಡಿದರು. ಅವರು 'ಮಾನವೀಯ ಮೌಲ್ಯಗಳ ಬೆಳವಣಿಗೆಗೆ ಸಹಾಯವಾಗುವ ಚಿಂತನಶೀಲ ಸಾಹಿತ್ಯ ಮಹಿಳಾ ಲೇಖಕಿಯರಿಂದ ಮೂಡಿ ಬರಬೇಕು' ಎಂದು ನುಡಿದರು.

ಕೈವಾರದಲ್ಲಿ ಜರುಗಿದ ೫೬ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಎ. ಎನ್. ಮೂರ್ತಿರಾಯರು ಮಾತನಾಡಿ ಲೇಖಕಿಯರು ಉನ್ನತ ಮಟ್ಟದ ಸಾಹಿತ್ಯ ರಚಿಸುವ ಸಂಕಲ್ಪಧಾರಿಗಳಾಗಬೇಕೆಂದು ಕರೆ ನೀಡಿದರು. ಧರ್ಮ-ಸ್ಥಳದ ಧರ್ಮಾಧಿಕಾರಿಗಳು ಸಮ್ಮೇಳನದ ನೆನಪಿನ ಸಂಚಿಕೆ "ತುಂಬೆ ಹೂ" ಬಿಡುಗಡೆ ಮಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಟಿ. ಆರ್. ಶಾಂತರಾಜು ರಚಿಸಿದ ಚಿತ್ರಕಲಾ ಪ್ರದರ್ಶನದ ಉದ್ಘಾಟನೆಯನ್ನು ವಿಧಾನಸಭಾ ಉಪಾಧ್ಯಕ್ಷರಾದ ಶ್ರೀ ವೀರಣ್ಣನವರೂ, ಪುಸ್ತಕ ಪ್ರದರ್ಶನದ ಉದ್ಘಾಟನೆಯನ್ನು ಸಚಿವ ಶ್ರೀ ರಾಜವರ್ಧನ್ ಮಾಡಿದರು.

ಮಹಿಳೆಯರ ಮಹತ್ವವನ್ನು ಕುರಿತು ಮಾತನಾಡಿದ ಡಾ|| ಶ್ರೀ ಶಿವಕುಮಾರ ಸ್ವಾಮಿಗಳು ಹಿಂದೂ ಧರ್ಮದ ನಾರಿ ನಡೆದು ಬಂದ ಬಗೆಯನ್ನು ಬಣ್ಣಿಸಿ, ಸನಾತನ ಸಂಪ್ರದಾಯದೊಂದಿಗೆ ವೈಜ್ಞಾನಿಕ ದೃಷ್ಟಿ ಬೆಳಸಿಕೊಳ್ಳಲು ಹೇಳಿದರು. ಶ್ರೀಮತಿ



ಶಾಂತಾ ಸನ್ಮತಿಕುಮಾರ್ ಅವರ ಕೃತಿ 'ಕರ್ಮ ಪ್ರಕೃತಿ' ಯನ್ನು ಖ್ಯಾತ ಲೇಖಕಿ ಶ್ರೀಮತಿ ಅನುಪಮ ನಿರಂಜನ ಬಿಡುಗಡೆ ಮಾಡಿದರು. ಶ್ರೀಮತಿ ಬಾ. ಹ. ರಮಾ ಕುಮಾರಿ ಅವರ ಕೃತಿ "ಅನಾವರಣ" ವನ್ನು ಖ್ಯಾತ ಹಾಸ್ಯಲೇಖಕಿ ಶ್ರೀಮತಿ ಟಿ. ಸುನಂದಮ್ಮ ಬಿಡುಗಡೆ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹಂಪನಾ ಕನ್ನಡ ಸಾಹಿತ್ಯದ ಪ್ರಗತಿ ಚಿತ್ರವನ್ನು ಎಳೆ ಎಳೆಯಾಗಿ ಬಿಡಿಸಿ ಮಾತನಾಡಿದರು. ಪ್ರಾರಂಭದಲ್ಲಿ ಸ್ವಾಗತ ಸಮಿತಿ ಅಧ್ಯಕ್ಷರಾದ ರಾಜ್ಯ ಕೃಷಿ ಸಚಿವ ಶ್ರೀ ಸಾಗರನಹಳ್ಳಿ ರೇವಣ್ಣನವರು ಸ್ವಾಗತಿಸಿದರು. ಜಿಲ್ಲಾ ಪರಿಷತ್ತಿನ ಅಧ್ಯಕ್ಷೆ ಶ್ರೀಮತಿ ಶಾಂತಾ ಸನ್ಮತಿಕುಮಾರ್ ವಂದಿಸಿದರು. ಶ್ರೀ ರಾಘವೇಂದ್ರರಾವ್ ಕಾರ್ಯಕ್ರಮವನ್ನು ನಿರ್ದೇಶಿಸಿದರು.

## ವಿಚಾರ ಗೋಷ್ಠಿ

ಖ್ಯಾತ ಕಾದಂಬರಿಗಾರ್ತಿ ಶ್ರೀಮತಿ ಆರ್ಯಾಂಬ ಪಟ್ಟಾಭಿ ಅವರ ಅಧ್ಯಕ್ಷತೆಯಲ್ಲಿ ಗಲಭರ ಲೇಖಕಿಯರ ಸಾಹಿತ್ಯ ಸಮೀಕ್ಷಾ ಗೋಷ್ಠಿಯು ಜರುಗಿತು. ಡಾ|| ಎಚ್. ಎಸ್. ಸುಜಾತಾ ಅವರು ಉದ್ಘಾಟಿಸುತ್ತಾ ಮಾನವನ ಭಾವ ವಿಕಾಸವಾಗುವಂತಹ ಚಿಂತನೆ ನಡೆಯಬೇಕು ಎಂದು ಕರೆ ನೀಡಿದರು. ಈ ಗೋಷ್ಠಿಯಲ್ಲಿ ಕಾವ್ಯವನ್ನು ಕುರಿತು ಶ್ರೀಮತಿ ಮಾಲತಿ ಪಟ್ಟಣಶೆಟ್ಟಿ, ಕಥೆಯನ್ನು ಕುರಿತು ಶ್ರೀಮತಿ ಗೀತಾ ನಾಗಭೂಷಣ, ಕಾದಂಬರಿ ಕುರಿತು ಶ್ರೀಮತಿ ಸರಸ್ವತಿ ವಿಜಯಕುಮಾರ್ ಅವರುಗಳು ಮನೋಜ್ಞವಾಗಿ ಮಾತನಾಡಿದರು. ಪ್ರೊ|| ಅನ್ನಪೂರ್ಣಮೂರ್ತಿಯವರು ಗೋಷ್ಠಿಯ ನಿರ್ದೇಶಕರಾಗಿದ್ದರು.

## ಸನ್ಮಾನ ಸಮಾರಂಭ

ಸಂಜೆಯ ವರ್ಣರಂಜಿತ ಕಾರ್ಯಕ್ರಮದಲ್ಲಿ ಕರ್ನಾಟಕದ ೧೦ ಮಂದಿ ಖ್ಯಾತ ಲೇಖಕಿಯರಿಗೆ ಸನ್ಮಾನ ಸಮಾರಂಭವು ಜರುಗಿತು. ಯುವಜನ ಸೇವಾ ರಾಜ್ಯ ಸಚಿವರಾದ ಜೀವರಾಜ ಆಳ್ವ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸನ್ಮಾನಿತರನ್ನು ಅಭಿನಂದಿಸಿ ನವಂಬರ್ ನಲ್ಲಿ ವಿಶ್ವ ಕನ್ನಡಮೇಳ ಜರುಗುವುದೆಂದು ನುಡಿದರು.

ಶ್ರೀಮತಿಯವರಾದ ಡಾ|| ಅನುಪಮ ನಿರಂಜನ, ವಾಣಿ, ಗೀತಾ ಕುಲಕರ್ಣಿ, ಎಂ. ಕೆ. ಇಂದಿರಾ, ಕಮಲಾ ಹಂಪನಾ, ಟಿ. ಸುನಂದಮ್ಮ, ಸುಲೋಚನಾ ದೇವಿ ಆರಾಧ್ಯ, ಜಗ್ಗು ಪ್ರಿಯದರ್ಶಿನಿ – ಈ ಎಂಟು ಮಂದಿಯನ್ನು ಗೈರು ಹಾಜರಿಯಾದ ಜಯದೇವಿ ತಾಯಿ ಲಿಗಾಡೆ, ಶಾಂತಾದೇವಿ ಮಾಳವಾಡ ಅವರೊಂದಿಗೆ ಶಾಲು

ಹೊದಿಸಿ ನೆನಪಿನ ಕಾಣಿಕೆಯೊಂದಿಗೆ ಸನ್ಮಾನಿಸಲಾಯಿತು. ಈ ಸಂದರ್ಭದಲ್ಲಿ ಆಹ್ವಾನಿತ ಲೇಖಕಿಯರಿಗೆಲ್ಲಾ ಸುಮಾರು ನೂರು ಮಂದಿಗೆ ನೆನಪಿನ ಕಾಣಿಕೆ ನೀಡಲಾಯಿತು. ಕಮಲೇಶ್ ಕಾರ್ಯಕ್ರಮ ನಿರ್ದೇಶಿಸಿದರು. ಶಾಂತಾ ಸನ್ಮತಿ ಕುಮಾರ್ ವಂದಿಸಿದರು.

ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ಕುಮಾರಿ ಟೀನಾಜವಳಿ ವೃಂದದವರಿಂದ ನೃತ್ಯ ಪ್ರದರ್ಶನ ಜರುಗಿತು.

## ಗೋಷ್ಠಿ — ೧

ಭಾನುವಾರ ಬೆಳಿಗ್ಗೆ ೯-೩೦ ರಿಂದ ಶ್ರೀಮತಿ ಅನಸೂಯ ರಾಮರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ಗೋಷ್ಠಿ ಪ್ರಾರಂಭವಾಯಿತು. ಶ್ರೀಮತಿ ಹೆಚ್. ಎಸ್. ಪಾರ್ವತಿ ಉದ್ಘಾಟಿಸಿ ಲೇಖಕಿಯರು ವಿಮರ್ಶಾ ದೃಷ್ಟಿ ಬೆಳಸಿಕೊಳ್ಳಲು ತೋರಿದರು. ಕಾದಂಬರಿಯನ್ನು ಕುರಿತು ಶ್ರೀಮತಿ ಕೆ. ರಾಜೇಶ್ವರಿ ಗೌಡ, ಗ್ರಂಥ ಸಂಪಾದನೆ ಕುರಿತು ಶ್ರೀಮತಿ ವೈ. ಸಿ. ಭಾನುಮತಿ, ಪ್ರವಾಸ-ನಾಟಕ ಕುರಿತು ಶ್ರೀಮತಿ ಕೆ. ಎಸ್. ನಿರ್ಮಲಾದೇವಿ ಅವರುಗಳು ಹೃತ್ಸ್ಪರ್ಶಿಯಾಗಿ ಮಾತನಾಡಿದರು. ವೇಳೆ ಮೀರಿ ನಡೆದರೂ ಗೋಷ್ಠಿ ಪ್ರೇಕ್ಷಕರಿಗೆ ಪ್ರಿಯವಾಗಿತ್ತು. ಶ್ರೀಮತಿ ಹೆಚ್. ಆರ್. ಸುನಂದ ಕಾರ್ಯಕ್ರಮ ನಿರ್ದೇಶಿಸಿದರು. ಶ್ರೀಮತಿ ಲಲಿತಾ ಮೃತ್ಯುಂಜಯ ಸ್ವಾಗತಿಸಿದರು. ಶ್ರೀಮತಿ ಸಿದ್ಧಗಂಗಮ್ಮ ವಂದನಾರ್ಪಣೆ ಸಲ್ಲಿಸಿದರು.

## ಗೋಷ್ಠಿ — ೨

ಬೆಳಿಗ್ಗೆ ೧೦ಕ್ಕೆ ಪ್ರಾರಂಭವಾದ ಸಾಹಿತ್ಯ ಸಮೀಕ್ಷಾ ಗೋಷ್ಠಿಯು ಶ್ರೀಮತಿ ವಿಜಯಾ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಅವರು ಅನಕ್ಷರತೆ ತೊಡೆವ ತನಕ ದೇಶದಲ್ಲಿ ಅನಕ್ಷರತೆ ತಾಂಡವವಾಡುವುದು. ಅದರ ನಿರ್ಮೂಲನೆಗೆ ಲೇಖಕಿಯರು ಸಂಘಟಿತರಾಗಿ ಎಂದು ಕರೆ ನೀಡಿದರು. ಖ್ಯಾತ ಕಾದಂಬರಿಗಾರ್ತಿ ಶ್ರೀಮತಿ ಗೀತಾ ಕುಲಕರ್ಣಿ ಉದ್ಘಾಟನೆ ಮಾಡಿದರು. ಪ್ರಬಂಧ -ಸಂಶೋಧನೆ ಕೃತಿಗಳನ್ನು ಕುರಿತು ಡಾ|| ಪದ್ಮಾ ಶೇಖರ್, ವಿಜ್ಞಾನ-ಕಾನೂನು-ಧಾರ್ಮಿಕ ಕೃತಿ ಕುರಿತು ಶ್ರೀಮತಿ ಹೇಮಲತಾ ಮಹಿಷಿ, ಅನುವಾದ-ವಿಚಾರ ಸಾಹಿತ್ಯ ಕುರಿತು ಶ್ರೀಮತಿ ವರದಾ ಶ್ರೀನಿವಾಸ್ ಅವರುಗಳು ಮನ ಮಿಡಿಯುವಂತೆ ಮಾತನಾಡಿದರು. ಶ್ರೀಮತಿ ಛಾಯಾದೇವಿ ನಂಜಪ್ಪ ನಿರ್ದೇಶಿಸಿದ ಈ ಗೋಷ್ಠಿ ಪ್ರಾರಂಭದಲ್ಲಿ ಕುಮಾರಿ ತಾ. ಸ. ಪುಷ್ಪ ಸ್ವಾಗತಿಸಿದರು, ಶ್ರೀಮತಿ ಅನಸೂಯಮ್ಮ ಕಡೆಯಲ್ಲಿ ವಂದಿಸಿದರು.



## ಕವಿ ಗೋಷ್ಠಿ

ಸಂಜೆ ೪ ಗಂಟೆಗೆ ಶ್ರೀಮತಿ ಸುಕನ್ಯಾ ಮಾರುತಿ ಅವರ ಅಧ್ಯಕ್ಷತೆಯಲ್ಲಿ ಕವಿಗೋಷ್ಠಿ ಜರುಗಿತು. ಆಕರ್ಷಕವಾದ ಈ ಗೋಷ್ಠಿಯಲ್ಲಿ ೩೫ ಕ್ಕೂ ಹೆಚ್ಚಿನ ಕವಯಿತ್ರಿಯರು ಕವನಗಳನ್ನು ಓದಿದರು. ಶ್ರೀಮತಿ ಶೈಲಜ ಉಡಚಣ ಅವರು ಕವಿಗೋಷ್ಠಿ ಉದ್ಘಾಟಿಸಿ, ಕವಯಿತ್ರಿಯರು ವಾಸ್ತವದ ಬುನಾದಿಯ ಮೇಲೆ ಕಾವ್ಯಭವನ ಕಟ್ಟಬೇಕೆಂದು ನುಡಿದರು.

ಶ್ರೀಮತಿ ಮಾತಂಗಿ ನಿರ್ದೇಶಿಸಿದ ಈ ಗೋಷ್ಠಿಯಲ್ಲಿ ಶ್ರೀಮತಿಯರಾದ ಉಷಾ ಬನವಾಸಿ, ಗೀತಾ ಅಕ್ಕಿ, ವಸಂತೀ ಚಂದ್ರ, ವಿಜಯಲಕ್ಷ್ಮಿ ಎಸ್. ಒಡೆಯರ್ ಬಾ. ಹ. ರಮಾಕುಮಾರಿ, ಕಲಾಶ್ರೀ, ಲೀಲಾವತಿ ತೋರಣಕಟ್ಟೆ, ಕನ್ನಿಕಾ ಪ್ರಭಾಕರ ಹೆಗ್ಗಡೆ, ವೇದವತಿ, ಕಮಲ ಹೆಮ್ಮಿಗೆ, ಸ. ಉಷಾ, ಕವಿತಾ ಸಿದ್ದಪ್ಪ ಬಗಲಿ, ಲಕ್ಷ್ಮಿದೇವಿ, ವಿ. ಆರ್. ಪ್ರತಿಭಾ, ರಂಜನಾ ನಾಯಕ್, ಡಿ ಕೆ. ಭಾಗ್ಯ, ಅನಪಮ ಚಪಳೂಣಕರ್, ರಂಜನಾ ಮುಂತಾದವರು ಪಾಲ್ಗೊಂಡಿದ್ದರು.

## ಸಮಾರೋಪ ಸಮಾರಂಭ

ಭಾನುವಾರ ರಾತ್ರಿ ೭ ಕ್ಕೆ ಪ್ರಾರಂಭವಾದ ಈ ಕಾರ್ಯಕ್ರಮದಲ್ಲಿ ಹಾಸ್ಯ ಲೇಖಕಿ ಶ್ರೀಮತಿ ಟಿ. ಸುನಂದಮ್ಮನವರು ಸಮಾರೋಪ ಭಾಷಣ ಮಾಡಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಹಂಪನಾ ಅವರು ಮುಂದಿನ ಸಮ್ಮೇಳನಕ್ಕೆ ಮಹಿಳಾ ಅಧ್ಯಕ್ಷರನ್ನು ಆಯ್ಕೆ ಮಾಡಲಾಗುವುದೆಂದು ನುಡಿದು, ನಡುವೆ ಹಾಸ್ಯ ಚಟಾಕಿ ಹಾರಿಸಿದರು. ಸಮ್ಮೇಳನದ ಯಶಸ್ಸು ಕುರಿತು ಮುಂಬಯಿಯ ಶ್ರೀಮತಿ ಸುನೀತ ಶೆಟ್ಟಿ, ಸುಮತಿ ಪಾಂಗಳ, ನಾಗಮಣಿ ಎಸ್. ರಾವ್ ಮುಂತಾದವರು ಮಾತನಾಡಿ ತುಮಕೂರಿನ ಜನ ಸಾರ್ಥಕ ಕೆಲಸ ಮಾಡಿದ್ದಾರೆ. ಸಮ್ಮೇಳನ ನಿಜಕ್ಕೂ ಮರೆಯಲಾಗದ ಅನುಭವ ನೀಡಿದೆ ಎಂದು ಶ್ಲಾಘಿಸಿದರು.

ಸ್ವಾಗತ ಭಾಷಣದಲ್ಲಿ ಸಾಹಿತಿ ಶ್ರೀ 'ಕವಿತಾಕೃಷ್ಣ' ಅವರು ಜಿಲ್ಲೆಯ ಹಿರಿಮೆಯನ್ನೂ, ವೇದಿಕೆ, ಮಂಟಪ, ಸ್ಮರಣ ಸಂಚಿಕೆಗಳಿಗಿಟ್ಟ ಹೆಸರುಗಳ ಔಚಿತ್ಯ ಕುರಿತು ಮಾತನಾಡಿದರು. ಕಡೆಯಲ್ಲಿ ಕಾರ್ಯದರ್ಶಿ ಶ್ರೀ ರಾಘವೇಂದ್ರರಾವ್ ವಂದಿಸಿದರು.

ಒಟ್ಟಾರೆ ಎರಡು ದಿನದ ಸಮ್ಮೇಳನ ಆತ್ಮೀಯವಾಗಿತ್ತು. ಮಹಿಳಾ ಲೇಖಕಿಯರಿಗೆ ಒಂದು ರೀತಿಯ ಆಶಾ ಜೀವನವನ್ನು ಮೂಡಿಸಿದಂತಿತ್ತು. ಹೃನ್ಮನಗಳಿಗೆ, ಬುದ್ಧಿಗೆ, ರಸಕವಳ ನೀಡಿದ ಸಮ್ಮೇಳನದ ಯಶಸ್ಸಿಗೆ ಹಂಪನಾ ಸಲಹೆ, ಶ್ರೀಮತಿ ಶಾಂತಾ ಸನ್ಮತಿಕುಮಾರ್ ಅವರ ಆಸಕ್ತಿ, ಹೆಚ್. ಆರ್. ಗುಂಡೂರಾಯರ ಮಾರ್ಗದರ್ಶನ, ಶ್ರೀ ರಾಘವೇಂದ್ರರಾವ್‌ರ ಶ್ರಮ, ದಾನಿಗಳ ನೆರವು, ಕಾರಣವೆಂದರೆ ಉತ್ಪ್ರೇಕ್ಷೆ ಅಲ್ಲ. ಲೇಖಕಿಯರ ಈ ಸಾಹಿತ್ಯ ಸಮ್ಮೇಳನ ಅರ್ಥಪೂರ್ಣವಾಗಿತ್ತು.



# ತ್ಯಾಗಜೀವಿ ಟಿ. ಸಿದ್ಧಲಿಂಗಯ್ಯ ಅವರು ಇನ್ನಿಲ್ಲ

ಭಾರತೀಯ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಕರ್ನಾಟಕದಲ್ಲಿ ಬೆಳಗಿದ ಕೆಲವೇ ಮಹಾ ನಿಷ್ಠಾವಂತ ಹೋರಾಟಗಾರರಲ್ಲಿ ದೊಡ್ಡಬಳ್ಳಾಪುರದ ಶ್ರೀ ಟಿ. ಸಿದ್ಧಲಿಂಗಯ್ಯನವರಿಗೆ ಒಂದು ವಿಶಿಷ್ಟ ಗೌರವಾರ್ಹ ಸ್ಥಾನ ಮೀಸಲಾಗಿದೆ. ಪ್ರತ್ಯಾಶಾರಹಿತವಾದ ತ್ಯಾಗಮಯ ಸ್ವಾತಂತ್ರ್ಯ ಸಂಗ್ರಾಮ ಯೋಧರಾಗಿ ದೀರ್ಘ ಕಾಲ ಹೋರಾಟಮಾಡಿ ಮೈಸೂರಿನ ಇತಿಹಾಸದಲ್ಲಿ ಅಚ್ಚಳಿಯದ ಕಲಂಕರಹಿತ ರಾಜಕಾರಣಿಯೆನಿಸಿ ೯೦ ವರ್ಷಗಳ ನಿಡುಬಾಳು ಬಾಳಿದ ವಯೋವೃದ್ಧ ದೇಶಪ್ರೇಮಿ ತಾ|| ೨೭-೬-೮೪ರಲ್ಲಿ ನಿಧನರಾದುದು ಕರ್ನಾಟಕಕ್ಕೆ ತುಂಬಿಬಾರದ ನಷ್ಟವನ್ನುಂಟುಮಾಡಿದೆ. ಕರ್ನಾಟಕ ಓರ್ವ ಹಿರಿಯ ಸ್ವಾತಂತ್ರ್ಯ ಹೋರಾಟ ದೀಕ್ಷಾಬದ್ಧ ಪ್ರಬುದ್ಧ ಚೇತನ, ಸಂಸದೀಯ ವ್ಯವಹಾರ ಚತುರ, ನಿಸ್ವಾರ್ಥಬುದ್ಧಿಯ ಶುದ್ಧಹಸ್ತದ ಆಡಳಿತಗಾರ ಇತ್ಯಾದಿ ಕೀರ್ತಿಯನ್ನು ತಮ್ಮ ಹಿಂದೆ ಬಿಟ್ಟು ಹೋದ ಹಳೆಯ ತಲೆಮಾರಿನ ಬೆರಳೆಣಿಕೆಯ ತ್ಯಾಗಿಗಳಲ್ಲಿ ಒಬ್ಬರಾದ ಶ್ರೀ ಸಿದ್ಧಲಿಂಗಯ್ಯನವರ ಸ್ಥಾನವನ್ನು ತುಂಬಬಲ್ಲ ಪ್ರಬುದ್ಧ ವ್ಯಕ್ತಿಯನ್ನು ಇನ್ನು ನಾವು ಯಾವಾಗ ಕಾಣಬೇಕೋ ಕಾದು ನೋಡಬೇಕಾದ ಪರಿಸ್ಥಿತಿಯೊದಗಿದೆ.

ಇಂದಿನಂತಹ ರಾಜಕೀಯ ಸ್ಥಾನಮಾನ ಸಂಪಾದನೆಯ ಸ್ಪರ್ಧೆಗೆ ಎಂದೂ ಮನಸ್ಸು ಮಾಡದ ಶ್ರೀಯುತರು ತಮ್ಮನ್ನೇ ಸ್ಥಾನಮಾನಗಳು ಹುಡುಕಿಕೊಂಡು ಬಂದಾಗ ಅದನ್ನು ಸ್ವೀಕರಿಸಿ ಸ್ವಚ್ಛವಾದ ಕೆಲಸಮಾಡಿ, ಬೇಡವೆನಿಸಿದಾಗ ಸ್ಥಾನಮಾನಗಳನ್ನು ಕಸದಂತೆ ಕಂಡು ಸ್ವತಂತ್ರವಾಗಿ ಬಾಳು ಸಾಗಿಸಿದ ಸಿದ್ಧಲಿಂಗಯ್ಯನವರಂಥ ತ್ಯಾಗಿಗಳನ್ನು ಹುಡುಕುವುದು ಕಷ್ಟದ ಕೆಲಸ.

ಇಂದಿನಂತಹ ರಾಜಕೀಯ ಜೀವನದ ವ್ಯಕ್ತಿಗಳಲ್ಲಿ ಬೆರೆಯಲು ಇಚ್ಛೆಪಡದೆಯೋ ಏನೋ ಅಥವಾ ತಮ್ಮ ಅಭಿಪ್ರಾಯಕ್ಕೆ ಇಂದಿನ ಸ್ಪರ್ಧಾತ್ಮಕ ಗುಂಪುಗಾರಿಕೆಯ ರಾಜಕೀಯ ಪರಿಸರ ಹೊಂದಿಕೊಳ್ಳತಕ್ಕದ್ದಲ್ಲವೆಂದೋ ಏನೋ ಕಳೆದ ೧೮-೨೦ ವರ್ಷ



ಗಳಿಂದ ಅವರು ರಾಜಕೀಯ ಜೀವನದ ಸಂಪರ್ಕವನ್ನೇ ಕಳೆದುಕೊಂಡು ಅಜ್ಞಾತದಂತೆಯೇ ಇದ್ದುಬಿಟ್ಟದ್ದು ಇವರ ನಿಸ್ವಾರ್ಥ ಜೀವನಕ್ಕೊಂದು ಹಿಡಿದ ಕನ್ನಡಿಯೆನ್ನಬಹುದು.

ಶ್ರೀ ಸಿದ್ಧಲಿಂಗಯ್ಯನವರು ನಿಜವಾಗಿಯೂ ಹುಟ್ಟು ಹೋರಾಟಗಾರರು. ಮೈಸೂರು ಕಾಂಗ್ರೆಸ್ಸಿನ 'ಸ್ವಾತಂತ್ರ್ಯ ಹೋರಾಟ ಸಮರದ ಅಗ್ರ ನಾಯಕರು. ಮೈಸೂರು ರಾಜ್ಯದ ಕಾಂಗ್ರೆಸ್ ಸಂಸ್ಥೆಯ ಮೊದಲ ಅಧ್ಯಕ್ಷರೂ ಇವರೇ. ತಮ್ಮ ಸಮಾನಧರ್ಮದ ಅನೇಕ ಮುಖಂಡರೊಡನೆ ಇವರು ನಡೆಸಿದ ಭಾರತ ಸ್ವಾತಂತ್ರ್ಯಾಂದೋಳನದ ಚರಿತ್ರೆ ಸತ್ವದಿಂದ ಕೂಡಿದುದು. ೧೯೩೮ ರಲ್ಲಿ ಮದ್ದೂರಿನ ಹತ್ತಿರದ ಶಿವಪುರದ ಇತಿಹಾಸಪ್ರಸಿದ್ಧ ಸತ್ಯಾಗ್ರಹ ಚಳುವಳಿಯ ನೇತಾರರು ಇವರೇ ಎಂಬುದನ್ನು ಬಹುಜನರು ತಿಳಿದಿರಲಿಕ್ಕಿಲ್ಲ. ಸಿದ್ಧಲಿಂಗಯ್ಯನವರ ನಾಯಕತ್ವದ ಮಹತ್ವವನ್ನಳತೆ ಮಾಡುವುದು ಅವರು ಎಷ್ಟು ವರ್ಷ, ಎಷ್ಟು ಸಲ ಮಂತ್ರಿಗಳಾಗಿದ್ದರೆಂಬುವುದರ ಮೇಲಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ಇವರು ತಮ್ಮನ್ನು ತಾವು ಹೇಗೆ ಅರ್ಪಿಸಿಕೊಂಡಿದ್ದರು ; ಆ ಹೋರಾಟದ ಹಿನ್ನೆಲೆಯ ಅವರ ಶುದ್ಧವಾದ ಮಾನಸಿಕ ಸ್ಥೈರ್ಯಧೈರ್ಯಗಳೇನು ಎಂಬುದರ ಮೇಲಿಂದ ಅಳತೆಮಾಡಬೇಕಾಗುತ್ತದೆ. ಸ್ವಾರ್ಥವನ್ನೆಲ್ಲ ಬದಿಗೊತ್ತಿ ಅನೇಕ ಕಷ್ಟನಷ್ಟಗಳಿಗೀಡಾಗಿ ಐದಾರುಸಲ ಸೆರೆಮನೆವಾಸದ ಕಹಿಯನ್ನು ಅನುಭವಿಸಿದುದರ ಹೋರಾಟದ ಹಿಂದೆ ಇರುವ ಚಿತ್ತಸ್ಥೈರ್ಯದ ಮೇಲೆಯೇ ಅವರನ್ನು ಅಳತೆ ಮಾಡಬೇಕಾಗುತ್ತದೆ. ಭಾರತೀಯರ ಗುಲಾಮಗಿರಿಯಿಂದಾದ ಅಸಹನೀಯದ ಅಪಮಾನವನ್ನು ಅವರು ಪ್ರಥಮತಃ ಅನುಭವಿಸಿದ್ದು ದೂರದ ಅಮೇರಿಕಾದೇಶದಲ್ಲಿ. ೧೯೩೭ ರಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನದ ವಲಸೆ ಕಾನೂನಿನನ್ವಯ ಕ್ಯಾಲಿಪೋರ್ನಿಯಾದಲ್ಲಿ ಬಂಧಿತರಾಗಿ ಅಲ್ಲಿನ ಸೆರೆಮನೆ ಸೇರಿ ಗುಲಾಮಗಿರಿಯ ಘೋರ ನರಕದ ಸ್ವರೂಪ ದರ್ಶನವಾದಮೇಲೆ ಅವರು ಭಾರತ ಸ್ವಾತಂತ್ರ್ಯ ಸಂಗ್ರಾಮದ ಮಹಾ ಯಜ್ಞಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡರೆಂದು ಹೇಳಬಹುದು. ಆ ಸಮಯಕ್ಕಾಗಲೆ ಅವರು ಆಗಿನ ಮೈಸೂರು ರಾಜ್ಯದ ರೆಪ್ರಜೆಂಟೆಟಿವ್ ಅಸೆಂಬ್ಲಿಯ ಸದಸ್ಯರಾಗಿ ಸಾರ್ವಜನಿಕ ಸೇವಾಕ್ಷೇತ್ರ ಪ್ರವೇಶ ಮಾಡಿದ್ದರೂ ಸ್ವಾತಂತ್ರ್ಯ ಹೋರಾಟಕ್ಕೆ ಪ್ರವೇಶಿಸಿದ್ದು ೧೯೩೫ ರಲ್ಲಿ. ಭಾರತದಲ್ಲೆಲ್ಲ ಆ ಕಾಲ ವಿದ್ಯುದ್ವೇಗದಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನಗಳನ್ನು ಅಣಿಗೊಳಿಸುತ್ತಿದ್ದ ಕಾಲ. ೧೯೩೪ ರಲ್ಲಿ ಗಾಂಧಿಯವರು ಭಾರತಾದ್ಯಂತ ತಿರುಗಿ ಜನಜೀವನದಲ್ಲಿ ಸ್ವಾತಂತ್ರ್ಯದ ಕೆಚ್ಚು-ನೆಚ್ಚುಗಳನ್ನು ತುಂಬುತ್ತಿದ್ದ ಮಹತ್ವದ ಕಾಲ. ಇವರಂತೆ ಸರ್ದಾರ್ ಪಟೇಲರ ಉದ್ಬೋಧಕ ಭಾಷಣಗಳು ಎಂಥವರಲ್ಲೂ ಕೆಚ್ಚು-ನೆಚ್ಚುಗಳನ್ನು ತುಂಬುತ್ತಿದ್ದ ಕಾಲ. ೧೯೩೫ ರಲ್ಲಿ ಪಟೇಲರು ದೊಡ್ಡಬಳ್ಳಾಪುರದಲ್ಲಿ ಮಾಡಿದ ಭಾಷಣದಿಂದ ಪ್ರಚೋದಿತರಾದ ಶ್ರೀ ಸಿದ್ಧಲಿಂಗಯ್ಯನವರು ತಮ್ಮನ್ನು ತಾವು ಪೂರ್ಣವಾಗಿ ಸ್ವಾತಂತ್ರ್ಯ ಸಂಗ್ರಾ

ಮಕ್ಕೆ ಅರ್ಪಿಸಿಕೊಂಡರು. ಅಂದಿನಿಂದ ಸ್ವಾತಂತ್ರ್ಯ ಪ್ರಾಪ್ತವಾಗುವವರೆಗಿನ ಇವರ ಸತ್ವಪೂರ್ಣ ತ್ಯಾಗಮಯ ಹೋರಾಟ, ಆ ಹೋರಾಟದಲ್ಲಿ ಅನುಭವಿಸಿದ ಕಷ್ಟ-ನಷ್ಟಗಳು ಅವರ ಜೀವಿತಕ್ಕೆ ಮಹಾಮೂಲ್ಯಗಳನ್ನು ತಂದಿತ್ತವು.

ಮುಂದೆ ಸ್ವತಂತ್ರ ಭಾರತದಲ್ಲಿ ಮೈಸೂರು ರಾಜ್ಯ ರೂಪುಗೊಂಡಾಗ ಪ್ರಥಮ ಶ್ರೀ ಕೆ. ಸಿ. ರೆಡ್ಡಿಯವರ ನಾಯಕತ್ವದ ಸರಕಾರದಲ್ಲಿ ಮಂತ್ರಿಗಳಾದರು ಅನಂತರ ೧೯೫೨ ರಲ್ಲಿ ಕೆಂಗಲ್ ಹನುಮಂತಯ್ಯನವರ ಸರಕಾರದಲ್ಲಿ ಕೈಗಾರಿಕಾ ಮಂತ್ರಿಗಳಾದರು. ಆ ಕಾಲದಲ್ಲಿ ತಾಮ್ರದ ತಂತಿ ಕಳುವಿನ ಪ್ರಸಂಗವೊಂದು ಯಾರಿಂದಲೋ ನಡೆದ ಸಂದರ್ಭದಲ್ಲಿ ಮಂತ್ರಿಪದವಿಗೆ ವಿದಾಯ ಹೇಳಿದ ಇವರು ರಾಜಕೀಯದಿಂದ ದೂರವಿರಲು ಮನಸ್ಸು ಮಾಡಿದವರು.

ಒಟ್ಟಿನಲ್ಲಿ ಇವರದು ಪ್ರತಿಫಲಾಪೇಕ್ಷೆಯಿಲ್ಲದ ತೃಪ್ತ ಜೀವನ; ನಿಷ್ಕಪಟ ಮನೋಭಾವ; ನಿಗರ್ವಬುದ್ಧಿ-ಇವರ ಜೀವಿತದ ಪ್ರಧಾನಚರ್ಯೆಗಳು. ನಾಡಿಗಾಗಿ ತಾವು ಯಾವ ಮಣ್ಣಿಗೆ ಮಾಡಬೇಕೋ ಅದನ್ನೆಲ್ಲ ಮಾಡಿ ತ್ಯಾಗ ವೀರರೆನಿಸಿಕೊಂಡವರು. ಇಂಥ ಓರ್ವ ಆದರ್ಶ ಪುರುಷನ ಅಗಲಿಕೆ ಕರ್ನಾಟಕಕ್ಕೆ ತುಂಬಿಬಾರದ ನಷ್ಟ. ಅವರ ಇಂಥ ದಿವ್ಯ ಚೇತನಕ್ಕೆ ಸಿದ್ಧಗಂಗಾ ಪತ್ರಿಕೆ ತನ್ನ ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತದೆ ಅವರ ಅಗಲ್ಕೆಯಿಂದ ಸಂತಾಪಗೊಂಡ ಅವರ ಪುತ್ರ ಪುತ್ರಿಯರ ಸಂತಾಪವನ್ನು ಸಿದ್ಧಲಿಂಗೇಶ್ವರರು ದೂರ ಮಾಡಲೆಂದು ಹಾರೈಸುತ್ತೇವೆ.







# ಜ್ಞಾನಪೀಠ ಪ್ರಶಸ್ತಿ ವಿಜೇತ ಶ್ರೀನಿವಾಸರು

(ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್)

—ಪಂ. ಚನ್ನಪ್ಪ ಎರೇಸೀಮೆ.

ರಾಜಸೇವಾಸಕ್ತ ಡಾ॥ ಮಾಸ್ತಿ ವೆಂಕಟೇಶಯ್ಯಂಗಾರ್ ಅವರ ಕಾವ್ಯನಾಮ ಶ್ರೀನಿವಾಸರು. ಕನ್ನಡದಲ್ಲಿ ಬರೆಯಬಲ್ಲವರೇ ಇಲ್ಲದ ಏಳು ದಶಕಗಳ ಹಿಂದೆ ಸುಮಾರು ೧೯೧೦ ರಿಂದ ಈ ಕಾವ್ಯನಾಮದಿಂದ ಸಾಹಿತ್ಯ ಸೃಷ್ಟಿಗೆ ಕೈ ಹಾಕಿ ಅಂದಿನಿಂದ ಇಂದಿನವರೆಗೆ ಸಾಹಿತ್ಯ ಸರಸ್ವತಿಯ ಸೇವೆಯನ್ನು ಮಾಡಿ, ವೈವಿಧ್ಯಮಯವಾದ ಸುಮಾರು ೧೨೦ ಕೃತಿ ಪುಷ್ಪ ಸಮರ್ಪಿಸಿ ಕೃತಕೃತ್ಯತೆ ಪಡೆದ ಜ್ಞಾನವೃದ್ಧ, ವಯೋವೃದ್ಧ, ಶ್ರೀನಿವಾಸರಿಗೆ ೧೯೮೩ನೇ ವರ್ಷದ ರಾಷ್ಟ್ರಮಟ್ಟದ ಜ್ಞಾನಪೀಠ ಪ್ರಶಸ್ತಿ ಸಿಕ್ಕಿದ್ದು ಕನ್ನಡಿಗರಿಗೆಲ್ಲ ಸಂದ ಗೌರವವೇ ಆಗಿದೆಯೆಂಬುದು ಅತಿಶಯೋಕ್ತಿಯೇನಲ್ಲ. ಸ್ವಾತಂತ್ರ್ಯೋತ್ತರದ ಅದ್ವಿತೀಯ ಕಾದಂಬರಿಯೆಂದು ಇವರು ಬರೆದ 'ಚಿಕ್ಕ ವೀರರಾಜೇಂದ್ರ' ಎಂಬ ಕಾದಂಬರಿಯನ್ನು ಜ್ಞಾನಪೀಠ ಪ್ರಶಂಸಿಸುತ್ತ, ವೈಯಕ್ತಿಕ ದುರಂತ, ಸಾಮಾಜಿಕ ರಾಜಕೀಯ ಅಧಃಪತನ, ಐತಿಹಾಸಿಕ ಮುನ್ನಡೆಯ ಅನಿವಾರ್ಯತೆಗಳನ್ನು ಈ ಕಾದಂಬರಿ ಏಕ ಕಾಲದಲ್ಲಿ ಚಿತ್ರಿಸಿದೆ -ಎಂದು ಹೇಳಿರುವ ಪೀಠದ ಅಭಿಪ್ರಾಯವನ್ನು ಅಲ್ಲಗಳೆಯುವಂತಿಲ್ಲ. ಕೆಲವು ಸಾಹಿತಿಗಳು ಪ್ರಶಸ್ತಿಗೆ ಆರಿಸಿದ ಈ ಕಾದಂಬರಿಯ ಬಗೆಗೆ ಅಭಿಪ್ರಾಯ ಭೇದ ಹೊಂದಿರಬಹುದು; ಆದರೆ ಪ್ರಶಸ್ತಿಗೆ ಮಾತ್ರ ಮಾಸ್ತಿಯವರು ಅರ್ಹರೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅಷ್ಟೊಂದು ಸತ್ವದ ಬದುಕು ಅವರ ಸಾಹಿತ್ಯ ರಾಶಿಯಲ್ಲಿ ಹುದುಗಿದೆ.

ಸುಮಾರು ೧೪ ಕ್ಕೂ ಹೆಚ್ಚು ಸಣ್ಣ ಕಥೆಗಳ ಸಂಕಲನಗಳನ್ನು ಹೊರತಂದ ಶ್ರೀಯುತರ 'ಸಣ್ಣ ಕಥೆಗಳು' ಸತ್ವ-ಬನಿ-ಜೀವನಾನುಭವಗಳ ಚಿತ್ರಣಗಳ ದೃಷ್ಟಿಯಿಂದ

ಅತ್ಯುತ್ತಮವೆನಿಸಿದ ಕಾರಣವೇ ಇವರಿಗೆ ಸಣ್ಣಕತೆಗಳ ಜನಕರೆಂಬ ಖ್ಯಾತಿಯನ್ನು ತಂದುಕೊಟ್ಟಿವೆ. ಈ ವಿಷಯ ದಲ್ಲಿಯೂ ಕೆಲವು ವಿಮರ್ಶಕರು ಪಂಜೆ ಮಂಗೇಶರಾಯರ ಹೆಸರನ್ನು ಮುಂದೆ ತರಲು ಪ್ರಯತ್ನಿಸಿರುವುದುಂಟು. ಆದರೆ ನವೋದಯ ಸಣ್ಣ ಕಥಾ ಸಾಹಿತ್ಯಕ್ಕೆ ಒಂದು ಶಕ್ತಿಯನ್ನು ಕೊಟ್ಟು ವಿಶೇಷವನ್ನು ನವಿರನ್ನು ತುಂಬಿದ ಮಾಸ್ತಿಯವರು ಆ ಪ್ರಕಾಶಕ್ಕೆ ಒಂದು ವಿಶಿಷ್ಟ ಸ್ವರೂಪ ತಂದುಕೊಟ್ಟ ಕಾರಣವೇ ಇವರಿಗೆ ಸಣ್ಣಕಥೆಗಳ ಜನಕರೆಂಬ ಖ್ಯಾತ ನಾಮವನ್ನು ವಾಚಕಲೋಕ ಕೊಟ್ಟಿದೆ. ಕಥೆ ಹೇಳುವ ಅವರ ಕ್ರಮ ಅವರದೇ ಆದ ವಿಶಿಷ್ಟ ರೀತಿಯದು. ಅವುಗಳ ರೀತಿ ನೇರ ಮತ್ತು ಮಧುರ; ನಯವಾದ ಮಾತು; ಸಣ್ಣ ಸಣ್ಣ ವಾಕ್ಯಗಳು; ವಾಕ್ಯಗಳ ಜೊತೆಯಲ್ಲಿ ಸೇರಿದ ಸುಂದರ ಹೋಲಿಕೆಗಳು, ಓದಿದಮೇಲೆ ಓದುಗರಲ್ಲಿ ಒಳ್ಳೆಯದ ರಲ್ಲಿ ಉಂಟಾಗುವ ನಂಬಿಕೆ; ಸಾತ್ವಿಕ ಭಾವಬೋಧ– ಇವು ಇವರ ಸಣ್ಣಕಥೆಗಳ ಲಕ್ಷಣ. ರಸಿಕತೆ, ನವಿರಾದ ಹಾಸ್ಯ, ಶಾಂತಿ, ಸೌಹಾರ್ದ ಭಾವನೆಗಳೂ ಕೊರತೆಯಿಲ್ಲದ ಕಾರಣವೇ ಓದುಗ ತೃಪ್ತಿಯ ನಿಟ್ಟುಸಿರು ಬಿಡುವಂತಾಗುತ್ತವೆ.

ಸುಮಾರು ೧೮ ನಾಟಕಗಳನ್ನು ರಚಿಸಿದ ಮಾಸ್ತಿಯವರ ನಾಟಕಗಳ ಹಿಂದೆ ಇವರ ಸಣ್ಣಕತೆಗಳ ಹಿಂದಿರುವ ಮನೋಧರ್ಮವೇ ಕಾಣಿಸಿಕೊಂಡ ಕಾರಣ ತಾಳೀ-ಕೋಟಿ, ಶಿವಭಕ್ತಪತಿ, ಕಾಕನಕೋಟಿ, ಉಷಾ, ಯಶೋಧರಾ- ಮೊದಲಾದ ನಾಟಕಗಳು ಸತ್ವಭೂಯಿಷ್ಟಗಳಾಗಿವೆಯೆಂದು ಸಾಹಿತ್ಯಲೋಕದ ವಿಮರ್ಶಕರಿಂದ ಹೊಗಳಿಸಿಕೊಂಡಿವೆ.

ವಿಮರ್ಶೆ, ಕಾದಂಬರಿ, ಪ್ರಬಂಧ, ಹರಟೆ, ಕವನ,- ಯಾವ ಸಾಹಿತ್ಯ ಪ್ರಕಾರವನ್ನೇ ತೆಗೆದುಕೊಂಡರೂ ಮಾಸ್ತಿಯವರ ಬರವಣಿಗೆ ಸಂಯಮದಿಂದ ಕೂಡಿದ್ದು; ಮನಸ್ಸನ್ನು ಮಿಡಿಸುವಂತಹುದು; ವ್ಯಾವಹಾರಿಕ ಕೌಶಲ ಗಳಿಸಿ ಕೊಂಡಂತಹುದು. ಸಾಂಸ್ಕೃತಿಕ ಮೌಲ್ಯದ ಬಗೆಗೆ ಅತ್ಯಂತ ಕಳಕಳಿಯನ್ನು ಇವರ ಬರವಣಿಗೆಯಲ್ಲಿ ಕಾಣಬಹುದಾಗಿದೆ. ಆದ್ದರಿಂದಲೇ ಇವರ ಒಟ್ಟು ಬರವಣಿಗೆಯ ಬದುಕಿನ ಹಿಂದೆ ಮಾನವೀಯತೆಯ ಅನುಕಂಪ ಸ್ಥಾಯಿಯಾಗಿ ನಿಂತು ಆದರ್ಶದ ಸಂದೇಶ ಓದುಗನಿಗೆ ಅರಿಯದ ಹಾಗೆಯೇ ಮನಸ್ಸಿಗೆ ಬೋಧ್ಯವಾಗುತ್ತದೆ. ಸಾಹಿತ್ಯ ಮಾಡುವ ಸತ್ಯಃಪರ ನಿವೃತ್ತಿಯೆಂದರೆ ಇದೇ ಆಗಿದೆ. ಈ ಕಾರಣವೇ ಮಾಸ್ತಿ ಕನ್ನಡದ ಆಸ್ತಿ ಎಂಬ ಲೋಕಾಭಿಪ್ರಾಯದ ಗೌರವಾರ್ಹ ಬಿರುದು ಅನ್ವರ್ಥಕವಾಗಿದೆ ಎನ್ನಬಹುದು.

ಹುಟ್ಟಿನಿಂದ ಮಾಸ್ತಿಯವರು ಶ್ರೀಮಂತರಲ್ಲ. ಮಾಸ್ತಿಯವರು ಬಡಕುಟುಂಬವೊಂದರಲ್ಲಿ ಮಾಸ್ತಿಎಂಬ ಹಳ್ಳಿಯಲ್ಲಿ ಹುಟ್ಟಿಬೆಳೆದು ವಿದ್ಯಾಭ್ಯಾಸ ಮಾಡಿ ಮದ್ರಾಸು ವಿಶ್ವವಿದ್ಯಾಲಯದ ಇಂಗ್ಲೀಷ್ ಎಂ.ಎ. ಪದವಿಯನ್ನು ಪ್ರಥಮದರ್ಜೆಯಲ್ಲಿ ಪಡೆದು ಅಸಿಸ್ಟಂಟ್ ಕಮಿಷನರ್, ಕಮಿಷನರ್ ಎಕ್ಸೈಜ್ ಕಮಿಷನರ್



ಮೊದಲಾದ ಹುದ್ದೆಗಳಲ್ಲಿ ಉತ್ತಮ ಸೇವೆಸಲ್ಲಿಸುತ್ತಲೇ ಸಾಹಿತ್ಯ ನಿರ್ಮಾಣಕಾರ್ಯಕ್ಕೆಕೈಹಾಕಿ ಜೀವನದ ಎಲ್ಲ ಬಗೆಯ ಜನರ ಒಡನಾಟದಿಂದ ಲಭ್ಯವಾದ ಅಪಾರ ಅನುಭವವನ್ನು ಸುಖ ದುಃಖ, ಬೇಕು ಬೇಡ, ಅಲ್ಲ ಅಹುದುಗಳನ್ನು ತಾವು ಸೃಷ್ಟಿಸಿದ ಸಾಹಿತ್ಯದಲ್ಲಿ ತುಂಬುತ್ತ ಬಂದ ಕಾರಣವಾಗಿಯೆ ಇವರ ಬರವಣಿಗೆ ಶುಚಿ ರುಚಿಗಳು ಹಾಸು ಹೊಕ್ಕಾಗಿ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ನಿವೃತ್ತರಾದ ಮೇಲೆ ಇವರು ಸಂಪಾದಿಸಿ ಪ್ರಕಟಿಸುತ್ತಿದ್ದ 'ಜೀವನ' ಪತ್ರಿಕೆಯ ಮೂಲಕವೂ ಇವರ ಸೇವೆ ಮೂಲ್ಯವುಳ್ಳದ್ದಾಗಿಯೇ ಆಗಿದೆ. ೯೪ರ ವಾರ್ಧಕ್ಯದಲ್ಲೂ ಇವರ ಸಾಹಿತ್ಯ ನಿರ್ಮಾಣಕಾರ್ಯ ನಿರಂತಕ ಸಾಗಿರುವುದನ್ನು ನೋಡಿದರೆ ಸಂಸ್ಕಾರಯುಕ್ತ ಮಾನಸಿಕ ಉತ್ಸಾಹದ ಬದುಕಿನ ಬಗೆಗೆ ಎಲ್ಲರೂ ಗೌರವದಿಂದ ತಲೆತಗ್ಗಿಸುವಂತೆ ಮಾಡಿದೆ. ಅಧಿಕಾರವಾಣಿಯಿಂದ ಎಲ್ಲ ವರ್ಗದವರಿಗೂ ನಾಲ್ಕು ಹಿತನುಡಿ ಹೇಳುವ ಹಿರಿತನ ಒದಗಿಸಿದೆ.

ಇಂಥ ಬಹುಮುಖಪ್ರತಿಭೆಯ ಸಾತ್ವಿಕ ಬುದ್ಧಿಯ ಹಿರಿಯ ಸಾಹಿತಿ ಮಾಸ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ ಈ ಶುಭ ಸನ್ನಿವೇಶದಲ್ಲಿ ಸಿದ್ಧಗಂಗಾ ಮಾಸ ಪತ್ರಿಕೆ ತನ್ನ ಹೃತ್ಪೂರ್ವಕ ಅಭಿನಂದನೆ ಸಲ್ಲಿಸುತ್ತದೆ. ಅವರು ದೀರ್ಘಕಾಲ ನಮ್ಮ ಮಧ್ಯೆ ನಮಗೆಲ್ಲ ಹಿರಿಯರಾಗಿ ತಮ್ಮ ವಿಸ್ತರವಾದ ಅನುಭವ ಮೂಲ್ಯಗಳನ್ನು ತಿಳಿದವರಾಗಿ ಇರಲೆಂದು ಹಾರೈಸುತ್ತೇವೆ.

ವಿಧಾನ ಸೌಧದಲ್ಲಿ ತಾ. 29. 6. 84 ರಂದು "ಮಾಸ್ತಿ, ಕನ್ನಡದ ಆಸ್ತಿ" "ಜ್ಞಾನ ಪೀಠ ಪ್ರಶಸ್ತಿ" ವಿಜೇತರಾದ ಈ ಹಿರಿಯರಿಗೆ ಅಂದು ಪ್ರಭುತ್ವ ಸನ್ಮಾನಿಸಿ ನಾಡಿನ ಪರವಾಗಿ ಕೃತಜ್ಞತೆ ಸಲ್ಲಿಸಿ, ಅಭಿನಂದಿಸಿತು.

(10ನೇ ಪುಟದಿಂದ)

ಯಾವುದೂ ನನ್ನದಲ್ಲ ಎಲ್ಲಾ ದೇವರದು ಎಂದುಕೊಂಡು ತನ್ನ ಸ್ವಂತ ಸುಖಕ್ಕಾಗಿ ಯಾವುದನ್ನು ಬೇಡದೆ, ಯಾರನ್ನೂ ಕಾಡಿಸದೆ ಇರುವುದು ಆಗಬೇಕು. ನಿಜವಾದ ತ್ಯಾಗ-ವಿವೇಕಶುದ್ಧವಾದ ವಿರಕ್ತಿ ಆಗಬೇಕು. ವೈಯಕ್ತಿಕ ಪ್ರತಿಭೆಯಾದರೂ ಬೆಳಗುವಂತಾಗಬೇಕು.

ವೈರಾಗ್ಯ ಭಕ್ತಿಯನ್ನು ಅವಲಂಬಿಸಿರುತ್ತದೆ. ಭಕ್ತಿಯೆಂದರೆ ನಾಮ, ವಿಭೂತಿ, ಕುಂಕುಮ, ತುಲಸೀಸರ, ರುದ್ರಾಕ್ಷಿ, ತಾಯ್ತ ಇತ್ಯಾದಿ ಸಂಕೇತಗಳು ಎಂದು ಬಹು ಜನರ ನಂಬಿಕೆ. ಈ ಆಚಾರ ನಿಯಮಗಳು ಕೆಟ್ಟವೆಂದಾಗಲಿ, ವ್ಯರ್ಥವೆಂದಾಗಲಿ ಅಭಿಪ್ರಾಯವಲ್ಲ. ಭಕ್ತಿಗೆ ಅಷ್ಟು ಮಾತ್ರವೇ ಸಾಲದೆಂದು ಅನಿಸಿಕೆ. ದೈವಶಕ್ತಿ ವಿಕಾಸ ಬೇಕು ಈ ನಾಮ ವಿಭೂತಿಗಳು ಜಪ ಕೀರ್ತನೆಗಳು ಬೇಕಾದರೆ ಇದ್ದುಕೊಳ್ಳಲಿ ಇದರಿಂದ ಕೆಲವರ ಮನಸ್ಸಿಗೆ ಧೈರ್ಯ ನೆಮ್ಮದಿ ಬಂದೀತು. ಹೇಗೆಂದರೆ, ಮನೆಯ ಮುಂದೆ ರಂಗವಲ್ಲಿ ಇಟ್ಟು ತೋರಣ ಕಟ್ಟಿದರೆ ಮನೆಗೆ ಒಂದಿಷ್ಟು ಕಳೆ ಬರುವಂತೆ. ಆದರೆ ಕೇವಲ ಬಾಗಿಲ ತೋರಣ ಸಿಂಗರಿಸಿದ ಮಾತ್ರಕ್ಕೆ ಮನೆಯಲ್ಲಿ ಹಬ್ಬವಾದಂತಾಗುವುದಿಲ್ಲ. ಒಳಗಡೆ ಹೂರಣದ ಊಟವೂ ಇರಬೇಕು, ಅಂದರೆ ಭಕ್ತಿಯಲ್ಲಿ ನಾಮ ಕೀರ್ತನೆಗಳ ಜೊತೆಗೆ ಇದಕ್ಕಿಂತ ವಿವೇಕದ ಕಾರ್ಯಗಳೂ ಅತ್ಯವಶ್ಯಕವಾಗಿ ಬೇಕು. ಭಕ್ತಿಯೆಂದರೆ ಕೇವಲ ತಳಮಳವಲ್ಲ ಪುರುಷಶಕ್ತಿಯ ಒಂದು ಪ್ರಯೋಗ—

ಅಲಂವ್ರತೈಃ ಅಲಂತೀರ್ಥೈಃ ಅಲಂಯೋಗೈಃ ಅಲಂಮಖೈಃ ।
ಅಲಂ ಜ್ಞಾನ ಕಥಾಲಾಪೈಃ ಭಕ್ತಿರೇಕೈವ ಮುಕ್ತಿದಾ ॥

ಅಡಿಯಿಂದ ಮುಡಿಯವರೆಗೆ ಹರಿದು ಬರುವ ಒಂದು ಆತ್ಮಶಕ್ತಿ. ಈ ಭಕ್ತಿ, ಜೀವಲೋಕಕ್ಕೆ ತಲುಪಬೇಕಾದದ್ದು, ಭಕ್ತಿ ಒಳ್ಳೆಯ ಮಾತುಗಳನ್ನಾಡಿದರೆ ಸಾಲದು. ಯೋಗ್ಯ ಕಾಯಕದಲ್ಲಿ ತೊಡಗಿಸಿ ಲೋಕದ ಜೀವನಕ್ಕೆ ಉಪಯೋಗವಾಗಬೇಕು. "ದೇವನೊಬ್ಬ ನಾಮ ಹಲವು" "ಮಾನವ ಕುಲವೇ ನನ್ನ ಕುಲ" 'ಕಾಯಕವೇ ಕೈಲಾಸ' ವೆಂಬ ಶರಣ ಸಂದೇಶಗಳನ್ನು ಮೈಗೂಡಿಸುವಂತಾಗಬೇಕು. ಅದು ಭಗವಂತ ಸೃಷ್ಟಿಮಾಡಿರುವ "ಪ್ರತ್ಯಕ್ಷ ಕಾರ್ಯವಾದ"ಕ್ಕೆ ನಿಲುಕುವಂತಾಗಬೇಕು ಆಗಲೇ ಈ ಶಕ್ತಿ, ವೈರಾಗ್ಯಗಳು ಸಾರ್ಥಕವೆನಿಸಿಯಾವು.

ಈ ಆಭಾಸ ವೈರಾಗ್ಯದ ದೇವರನಾಮಗಳಿಂದಲೂ ನಮ್ಮ ಜನ ಬಿಡುಗಡೆಯಾಗಬೇಕು. ಹಣೆಯ ಬರಹದ ಗೊಣಗಾಟ ತೊಲಗಬೇಕು, ಸೋಲು ಮನಸ್ಸು ತೊಲಗಬೇಕು, ಗೆಲುಬುದ್ಧಿ ತಲೆ ಎತ್ತಬೇಕು, ಆಗಲೇ 'ಸರ್ವೇ ಜನಾಃ ಸುಖಿನೋಭವಂತು.'

(ದಿನಾಂಕ 12-7-83 ರ ಬೆಂಗಳೂರು ಆಕಾಶವಾಣಿ ಕೃಪೆಯಿಂದ ಪ್ರಸಾರವಾದುದು)



# ಗ್ರಾಮಾಂತರ ಬಸವ ಜಯಂತಿ — ೨

—ಹೆಚ್. ವಿ. ವೀರಭದ್ರಯ್ಯ

ಗವಿಮಠ, ಬೆಟ್ಟದಹಳ್ಳಿ, ಗುಬ್ಬಿ ತಲ್ಲೂಕು. ಪ್ರಶಾಂತ ವಾತಾವರಣ, ತೆಂಗು ತಲೆದೂಗಿದವು, ಬಾಳೆ ಕೈ ಬೀಸಿದವು. ಬೆಟ್ಟದ ಮೇಲೆ ವೀರಭದ್ರ, ತಪ್ಪಲಿಗೆ ಬೆಟ್ಟದಹಳ್ಳಿ. ಭಕ್ತರ ಆಗರ, ಸಾತ್ವಿಕರ ಸಾಗರ, ಕಲ್ಪವೃಕ್ಷದ ನಾಡು. ಗವಿಮಠದ ಅಧ್ಯಕ್ಷರು ಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಸ್ವಾಮಿಗಳು. ಪರಮ ಪೂಜ್ಯ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಗಳವರು ರೂಪಿಸಿದ ಮೂರ್ತಿ. ಅವರ ಆಸೆ, ಹಂಬಲ; ಬಸವ ಜಯಂತಿ ತಮ್ಮ ಮಠದಲ್ಲಿ ನೆರವೇರಿಸಬೇಕೆಂದು. ಕೈಗೂಡಿ ಬಂದಿತು — ತಾ॥ 11-4-1984 ರ ಬುಧವಾರದಂದು.

ಪ್ರಾತಃಕಾಲ; ಸೂರ್ಯೋದಯ; ಶಿವ ಧ್ವಜದ ಆರೋಹಣ. ಮಂಗಳ ವಾದ್ಯಗಳ ಪ್ರವಾಹ ಭೋರ್ಗರೆತ, ಸಿದ್ಧಗಂಗಾ ಶ್ರೀ ಶ್ರೀ ಗಳ ಆಗಮನ. ಕಲಶ ಕನ್ನಡಿ ಹಿಡಿದ ಮುತ್ತೈದೆಯರಿಂದ ಭಕ್ತಿಯ ಮಂಗಳಾರತಿ. ಭಕ್ತ ಸಮುದಾಯದಿಂದ ಧ್ವಜ, ಛತ್ರ ಚಾಮರಗಳೊಡನೆ ಶ್ರದ್ಧಾಂಜಲಿಯ ತುಂಬು ಸ್ವಾಗತ. ಭಕ್ತಿಯ ಮಹಾಪೂರದ ಕಣ್ಣಿಪ ಉತ್ಸವ, ಮೆರವಣಿಗೆ. ಗವಿಮಠದ ಗದ್ದುಗೆಯ ಬಳಿ ಸಿದ್ಧಗೊಂಡಿದ್ದ ಬಸವ ಮಂಟಪಕ್ಕೆ ಉತ್ಸವದೊಂದಿಗೆ ಹರಗುರು ಚರಮೂರ್ತಿಗಳೊಡನೆ, ಗವಿ ಮಠಾಧ್ಯಕ್ಷ ಪೂಜ್ಯ ಶ್ರೀ ಶ್ರೀ ಚಂದ್ರಶೇಖರ ಸ್ವಾಮಿಗಳೊಂದಿಗೆ ಸಿದ್ಧಗಂಗಾ ಶ್ರೀ ಶ್ರೀ ಗಳವರು ದಯಮಾಡಿದ ದೃಶ್ಯ ಚೇತೋಹಾರಿ.

ಸಭಾ ಮಂಟಪದ ವೇದಿಕೆ. ಹರಗುರು ಚರಮೂರ್ತಿಗಳಿಂದ, ಗಣ್ಯ ವಿದ್ವಾಂಸರಿಂದ ಅಲಂಕೃತ. ಅಧ್ಯಕ್ಷ ಪೀಠದಲ್ಲಿ ವೀರಶೈವ ಗುರು ಪರಂಪರೆಯ ಶ್ರೀ ಕಲಶ ಸದೃಶ ಶ್ರೀ ಶ್ರೀ ಸಿದ್ಧಗಂಗಾ ಗುರುಮೂರ್ತಿಗಳು. ಕಾರ್ಯಕ್ರಮ ಪ್ರಾರ್ಥನೆಯೊಂದಿಗೆ ಆರಂಭ. ವಚನ ಗಾಯನದ ಅನುಕರಣ ಬೆಟ್ಟದೆತ್ತರದಿಂದ. ತಮ್ಮಡಿಹಳ್ಳಿ ಮಠದ ಶ್ರೀ ಶ್ರೀ ಗಳಿಂದ, ಮೂಡಾಳು ಮಠದ ಶ್ರೀ ಶ್ರೀ ಗಳಿಂದ ಆಶೀರ್ವಚನ. ವಿದ್ವಾಂಸರಾದ ಶ್ರೀ ಬಿ. ವೀರಭದ್ರಯ್ಯ, ಶ್ರೀ ಹೇ. ಚಿ. ಶಾಂತವೀರಯ್ಯ, ಶ್ರೀ ವಿ. ವಿ. ಸಂಗಮದ ಅವರಿಂದ, ಹೈಕೋರ್ಟಿನ ನಿವೃತ್ತ ಮುಖ್ಯ ನ್ಯಾಯಾಧೀಶರಾದ ಡಿ. ಎಂ. ಚಂದ್ರಶೇಖರ್, ಶಾಸಕರಾದ ಎಸ್. ಮಲ್ಲಿಕಾರ್ಜುನಯ್ಯ, ಶ್ರೀ ಹೆಚ್. ವಿ. ವೀರಭದ್ರಯ್ಯ ಅವರುಗಳಿಂದ ಬಸವಣ್ಣನವರ ಜೀವನದ ವಿವಿಧ ಮುಖ ಪರಿಚಯಾತ್ಮಕ ಉಪನ್ಯಾಸ. ರಾಜ್ಯದ ಕೃಷಿ ಸಚಿವರಾದ ಶ್ರೀ ಎಸ್. ಶಿವಣ್ಣನವರಿಂದ ಭಾಷಣ. ಕಲಾ ಕಂಠೀರವ ಶ್ರೀ ಶಂಬಸವಯ್ಯನವರಿಂದ ಭಾಷಣ ನಡೆದವು.

ಕನಕಪುರದ ದೇಗುಲ ಮಠ ಶ್ರೀ ಶ್ರೀಗಳಾದ ಮುಮ್ಮಡಿ ನಿರ್ವಾಣಮಹಾ ಸ್ವಾಮಿಗಳವರಿಂದ ಸಮಾರಂಭದ ಉದ್ಘಾಟನೆ.

ಪರಮಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳವರು ಅಧ್ಯಕ್ಷಪೀಠದಿಂದ ನುಡಿದರು:– "ಜೀವನದ ದೃಷ್ಟಿ, ಭಾವ, ಕ್ರಿಯೆಯಲ್ಲಿಂದು ತ್ಯಾಗ.ಮನೋಭಾವ ಮೂಡಿರಬೇಕು. ದಿನವಹಿ ಜೀವನದಲ್ಲಿ ಬಸವಸಂದೇಶ ರಕ್ತಗತವಾಗಬೇಕು. ಬಸವಣ್ಣನ ಉದಯವಾಗದೇ ಹೋಗಿದ್ದರೆ ಹಿಂದೂಧರ್ಮಕ್ಕೆ ಬಹುದೊಡ್ಡ ಆಘಾತವಾಗುತ್ತಿತ್ತು. ಹಿಂದೂಧರ್ಮಕ್ಕೆ ಬಸವಣ್ಣನವರ ಕೊಡುಗೆ ಅಪಾರವಾದುದು, ವ್ಯಕ್ತಿ ಕ್ರಿಯಾಶೀಲರಾಗಿ ಬಾಳಬೇಕು ಎಂಬುದನ್ನು ಬಸವಣ್ಣನವರು ತೋರಿಸಿಕೊಟ್ಟಿದ್ದಾರೆ. ವ್ಯಕ್ತಿ ಚಾರಿತ್ರ್ಯ ಶುದ್ಧವಾಗದೆ ಸಮಾಜದ ಚಾರಿತ್ರ್ಯ ಶುದ್ಧವಾಗದು. ಜಗತ್ತಿಗೆ ಬಸವಣ್ಣ ನೀಡಿದ ಅದ್ಭುತ ದಿವ್ಯ ಮಂತ್ರ ಕಾಯಕ ತತ್ವ. ಅದೊಂದೇ ವಿಶ್ವದ ಪ್ರಗತಿಗೆ, ಸಮೃದ್ಧಿಗೆ ಸಮರ್ಥ ಪರಿಹಾರ"– ವೆಂದು ಶ್ರೀ ಶ್ರೀ ಗಳವರು ಆಶೀರ್ವಚನ ಮಾಡಿದರು. ಸುವ್ಯವಸ್ಥಿತವಾಗಿ ಕಾರ್ಯಕ್ರಮವನ್ನು ಏರ್ಪಡಿಸಿದ್ದ ಬೆಟ್ಟದಹಳ್ಳಿಯ ಶ್ರೀ ಶ್ರೀ ಗಳವರ ಶ್ರದ್ಧಾಸಕ್ತಿಗಳನ್ನು, ಭಕ್ತರ ಸಹಕಾರವನ್ನು ಮೆಚ್ಚಿಕೊಂಡರು.

ಸಮಾರಂಭಕ್ಕೆ ಸಮಾವೇಶಗೊಂಡಿದ್ದ ಸುಮಾರು ಹತ್ತು ಸಹಸ್ರ ಭಕ್ತ ಸಮೂಹಕ್ಕೆ ದಾಸೋಹದ ವ್ಯವಸ್ಥೆಮಾಡಲಾಗಿತ್ತು.

ಕಾಲೇಜಿನ ವಿದ್ಯಾರ್ಥಿಗಳಿಬ್ಬರು ಗಟ್ಟಿಯಾಗಿ ಮಾತಾಡಿಕೊಂಡು ಹೋಗುತ್ತಿದ್ದರು. ಇಷ್ಟೊಂದು ಜನಕ್ಕೆ ಊಟ ಹಾಕೋದಂದ್ರೆ ಸುಮ್ನೆ ಅಲ್ಲ ಬಿಡೋ. ಇನ್ನೊಬ್ಬನೆನ್ನುತ್ತಿದ್ದ "ಸಿದ್ಗಂಗೆ ಸಾಮಿಗಳಿದ್ದ ಕಡೆ ದಾಸೋಹ ಇರಲೇ ಬೇಕ್ ಕಣೋ"

ದಾಸೋಹ ಮೂರ್ತಿಗೆ ಯುವ ಜನಾಂಗದ ಭಕ್ತಿಯ ನುಡಿಕುಸುಮಾಂಜಲಿ ಅರ್ಪಿತವಾಗಿತ್ತು.

ರಾತ್ರಿ 'ಜಗಜ್ಯೋತಿ ಬಸವೇಶ್ವರ' ನಾಟಕದ ಪ್ರದರ್ಶನ ಶ್ರೀ ಕ್ಷೇತ್ರದ ನಾಟಕ ಮಂಡಳಿಯವರಿಂದ. ಕಿಕ್ಕಿರಿದ ಜನಸ್ತೋಮ. ಗಾಡಿ, ಟ್ರ್ಯಾಕ್ಟರ್‌ಗಳು ಹೊತ್ತುತಂದ ಪರಿಷೆ. ಬಯಲೆಲ್ಲ ಭಕ್ತಬೆಳೆಯಿಂದ ಪುಣ್ಯಾರಾಮವಾಗಿತ್ತು. ನಾಟಕ ಮುಗಿದಾಗ ಹೊತ್ತು ಮೂಡುತ್ತಿತ್ತು.



# ವಿವಿಧ ಸಮಾರಂಭಗಳಲ್ಲಿ—ಶ್ರೀ ಶ್ರೀಗಳವರು

—ಪಿ. ಎನ್. ಚಂದ್ರಶೇಖರಯ್ಯ

ದಿನಾಂಕ 2-6-84 ರಂದು ತುಮಕೂರಿನಲ್ಲಿ ನಡೆದ ಅಖಿಲ ಕರ್ನಾಟಕ ಲೇಖಕಿಯರ ತೃತೀಯ ಸಮ್ಮೇಳನದಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ, ಇಂದು ತುಮಕೂರಿನ ನಗರಕ್ಕೆ ಸೌಭಾಗ್ಯದ ದಿನ. ಲೇಖಕಿಯರ ಸಮ್ಮೇಳನ ಅರ್ಥಪೂರ್ಣವಾದುದು. ಲೇಖಕಿಯರನ್ನು ಗೌರವಿಸುವ ಕಾರ್ಯ ಮೆಚ್ಚತಕ್ಕದ್ದಾಗಿದೆ. ಪುರುಷರು ಮತ್ತು ಸ್ತ್ರೀ ಬರಹಗಾರರ ದೃಷ್ಟಿಕೋನ ಅಭಿನ್ನವಾದದ್ದು. ಈ ಸಮಾರಂಭದಲ್ಲಿ ಮಹಿಳಾ ಅಧ್ಯಕ್ಷಣಿಯನ್ನು ಆಯ್ಕೆ ಮಾಡುವ ಬದಲು ಪುರುಷರನ್ನು ಆಯ್ಕೆ ಮಾಡಿರುವುದು ಸ್ತ್ರೀಯರ ಔದಾರ್ಯವನ್ನು ವ್ಯಕ್ತಪಡಿಸುತ್ತದೆ. ಸ್ತ್ರೀ ತ್ಯಾಗಮಯಿ. ನಾವು ಭಾರತೀಯರು, ಭಾರತೀಯತ್ವವನ್ನು ಕಾಪಾಡಿಕೊಂಡು ಬರಬೇಕು. ನಮ್ಮ ಸನಾತನವಾದ ಧರ್ಮ ಸಂಸ್ಕೃತಿಯ ರಕ್ಷಣೆ ಅಗತ್ಯ. ಈ ದೃಷ್ಟಿಯಲ್ಲಿ ಭಾರತೀಯ ಹೆಣ್ಣುಮಕ್ಕಳ ಪಾತ್ರ ಹಿರಿದು. ಜಗತ್ತಿನ ಭವಿಷ್ಯ ಭಾರತೀಯ ಮಹಿಳೆಯನ್ನವಲಂಬಿಸಿದೆ. ನಮ್ಮ ಪ್ರಾಚೀನ ಭಾರತೀಯ ಮಹಿಳೆಯರಾದ ಗಾರ್ಗಿ, ಮೈತ್ರೇಯಿಯಂತಹ ಜ್ಞಾನಮಣಿಗಳಾಗಬೇಕು. ಹೆಣ್ಣು ರಾಕ್ಷಸಿ, ಮಾಯೆ, ಭೋಗವಸ್ತು, ಎಂದು ನಿಕೃಷ್ಟವಾಗಿ ಕಾಣುವುದು ನಮ್ಮ ದುರ್ದೈವ. ಹೆಣ್ಣು ಪರಮಾತ್ಮನ ದೃಷ್ಟಿಯಲ್ಲಿ ಎಲ್ಲದರಲ್ಲಿಯೂ ಸಮಾನ ಸ್ಪಂದಳು. ಆಕೆಗೂ ಸರ್ವ ಸ್ವಾತಂತ್ರ್ಯ ಅಗತ್ಯ ಎಂಬುದನ್ನು ಭಗವಾನ್ ಬಸವಣ್ಣನವರು ಆಚರಿಸಿ ತೋರಿಸಿ ಕೊಟ್ಟರು. ಆ ಕಾರಣ ಅಕ್ಕಮಹಾದೇವಿಯಂತಹ ವೈರಾಗ್ಯ ನಿಧಿ, ನೀಲಾಂಬಿಕೆ ಗಂಗಾಂಬಿಕೆಯರಂತಹ ಆದರ್ಶ ಗೃಹಿಣಿಯರು ಅನೇಕ ಶರಣೆಯರು ಬೆಳಕಿಗೆ ಬರಲು ಸಾಧ್ಯವಾಯಿತು. ಹೆಣ್ಣು ಮಕ್ಕಳು ವಚನ ರಚನೆ ಮಾಡಿ ಕನ್ನಡ ಸಾಹಿತ್ಯಶ್ರೀಯನ್ನು ಅಭಿವೃದ್ಧಿಗೊಳಿಸಿದರು. ಅಂತೆಯೇ ಆ ವಚನಗಳು ಮಾನವ ಕಲ್ಯಾಣಕ್ಕೆ ಅಂದಿನಿಂದ ಇಂದಿಗೂ ಸಾಧಕವಾಗಿವೆ. ಲೇಖಕಿಯರು ಬರೆಯುವ ಇಂದಿನ ಸಾಹಿತ್ಯ ಕೇವಲ ಮನರಂಜನೆಯಲ್ಲಿ ಮುಕ್ತಾಯವಾಗುವುದು ಯುಕ್ತವಲ್ಲ. ಪ್ರತಿಭಾಪೂರ್ಣವಾಗಿರಬೇಕು. ಜೀವನದ ಎಲ್ಲರಂಗಗಳಲ್ಲಿಯೂ ಪರಿಣತವಾದ ಮಹಿಳೆ ಮಾನವ ಜೀವನದ ಕೊಳೆಯನ್ನು ತೊಳೆಯುವಂತಹ ಸಾಹಿತ್ಯ ರಚನೆಯಲ್ಲಿ ತೊಡಗಬೇಕು. ಮಾನವನ ಗುರಿ; ಸಾಧನೆಯ ಕಡೆ, ಮಾನವ ಮಾನವನಾಗಿ ಬಾಳ್ವಿಕೆ ಮಾಡುವ ಕಲೆಯ ಬೆಳವಣಿಗೆಯ ಕಡೆ ಸಾಗಬೇಕು. ವ್ಯಕ್ತಿಯ ಜೀವನದಲ್ಲಿ ನೈತಿಕ ಪತನವಾಗುತ್ತಿದೆ. ಅದನ್ನು ಎಚ್ಚರಿಸುವಂತಹ ಸಾಹಿತ್ಯ ಮಹಿಳೆಯರಿಂದ ರಚಿತವಾಗಬೇಕು. **"ಹೆಣ್ಣುಮಕ್ಕಳು ಸಹನಾಶೀಲರು, ಅಂತೆಯೇ ಅಧ್ಯಯನಶೀಲ**

ರಾಗಬೇಕು. ಹೆಣ್ಣು ಮನೆತನದ ಗೌರವ ರಕ್ಷಕಳು, ಹೆಣ್ಣು ರಾಷ್ಟ್ರದ ಕಣ್ಣು, ಹೆಣ್ಣು ಮಕ್ಕಳು ರಾಷ್ಟ್ರದ ಆತ್ಮಸ್ವರೂಪರು. ಇಂದಿನ ಪುರುಷ ಪ್ರಧಾನ ಸಮಾಜದ ಚೈತನ್ಯ ಸ್ತ್ರೀ" ಎಂದು ಅಪ್ಪಣೆ ಕೊಡಿಸಿದರು.

* * *

ತಾ|| 24-6-84 ರಂದು ತುಮಕೂರಿನ ಉಡ್ ಲ್ಯಾಂಡ್ಸ್ ಸಭಾಂಗಣದಲ್ಲಿ ಅಮೃತವಾಣಿ ಸಂಜೆ ದಿನ ಪತ್ರಿಕೆಯನ್ನು ಬಿಡುಗಡೆ ಮಾಡುತ್ತಾ ಶ್ರೀ ಶ್ರೀ ಗಳವರು ಅಪ್ಪಣೆಕೊಡಿಸಿದರು. ಪತ್ರಿಕೆಗಳ ಉದ್ದೇಶ ಎರಡು 1) ಸಮಾಜ ಜಾಗೃತಿ 2) ಸಮಾಜದ ಶುದ್ಧೀಕರಣ. ಸ್ವಾತಂತ್ರ್ಯಾನಂತರ ದೇಶ ಹಾಗೂ ಸಮಾಜದಲ್ಲಿ ಅನಕ್ಷರತೆ ತಾಂಡವವಾಡುತ್ತಿದೆ. ಶೋಷಿತರ ಸಂಖ್ಯೆ ಮಿತಿಮೀರಿದೆ. ಸ್ವಾರ್ಥ ಸಾಧನೆಯಿಂದ ಸಮಾಜ ದುರ್ಬಲಗೊಳ್ಳುತ್ತಿದೆ. ಬಡತನ ಉಲ್ಬಣಗೊಳ್ಳುತ್ತಿದೆ. ಹೀಗಾಗಿ ಇಂದು ಶೋಷಣೆ ಸಮಾಜದ ಎಲ್ಲ ಕ್ಷೇತ್ರಗಳಲ್ಲಿಯೂ ವ್ಯಾಪಕವಾಗಿದೆ. ಈ ಶೋಷಣೆ ಅತ್ಯಂತ ಪುರಾತನವಾದುದು. ಈ ಬಗ್ಗೆ ಚಿಂತಿಸಿ ಉದ್ಧಾರದ ಮಾರ್ಗವನ್ನು ತೋರಿಸಿದ ಪುಣ್ಯ ಮೂರ್ತಿಗಳು ಬುದ್ಧ ಮತ್ತು ಬಸವಣ್ಣನವರು. ಈ ಶೋಷಣೆ ಸ್ವತಂತ್ರ ಭಾರತದಲ್ಲಿಯೂ ನಿಂತಿಲ್ಲ. ಪತ್ರಿಕೆಗಳಿಂದ ಈ ಕಾರ್ಯ ಸುಧಾರಿಸಬೇಕಾಗಿದೆ. ಪತ್ರಿಕೆಗಳು ಸತ್ಯಾಂಶವನ್ನು ಪ್ರಕಟಿಸಬೇಕು. ಅಲ್ಲಿ ವಿಚಾರ ವಂತಿಕೆ ಇರಬೇಕು. ರಚನಾತ್ಮಕ ಕೌಶಲವಿರಬೇಕು. ಚಾರಿತ್ರ್ಯ ವಧೆಗೆ ಅವಕಾಶ ಕೊಡಬಾರದು. ಸಮಾಜದ ಲೋಪದೋಷಗಳನ್ನು ತಿದ್ದಿ ಯೋಗ್ಯಮಾರ್ಗದರ್ಶನ ಮಾಡಬೇಕು. ಸಮಾಜ ಸಂಸ್ಕರಣಗೊಳ್ಳಬೇಕು. ವ್ಯಕ್ತಿಯ ಬಾಳು ಹಸನಾಗಬೇಕು. ಭಗವಾನ್ ಬಸವಣ್ಣನವರ ವಿ ಚಾ ರ ಕ್ರಾಂತಿಯಿಂದ 12 ನೆಯ ಶತಮಾನದಲ್ಲಿ ಆದ ಉರಿಲಿಂಗ ಪೆದ್ದಿ ತಿಗಳ ಸಂಸ್ಕರಣ ಜೀವನದ ಉಲ್ಲೇಖನವನ್ನು ಶ್ರೀ ಗಳವರು ಪ್ರಸ್ತಾಪಿಸಿದರು. ಪತ್ರಿಕೆಯ ಮಾಲೀಕರ ಧೈರ್ಯ ಸಾಹಸಗಳನ್ನು ಮೆಚ್ಚಿ ಈ ಪಣ್ಣಪತ್ರಿಕೆಯು ನಮ್ಮ ಜಿಲ್ಲೆಯ ಸ್ವರೂಪ ತಿಳಿಯಲು ಜನತೆಗೆ ಸಹಾಯಕ ವಾಗಲೆಂದು ಹಾರೈಸಿದರು.

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg. No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.